# "ಡಾ. ದೇಜಗೌ ಅವರ ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ : ಎರಡು ಐತಿಹಾಸಿಕ ನಾಟಕಗಳ ಒಂದು ಅಧ್ಯಯನ"

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ


ನಿಬಂಧಕಾರರು

**ವಿಜಯಕುಮಾರ**

ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಮಳಲಿ ವಸಂತಕುಮಾರ್**

ನಿವೃತ್ತ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು





ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮-೦೯

# "ಡಾ. ದೇಜಗೌ ಅವರ ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ : ಎರಡು ಐತಿಹಾಸಿಕ ನಾಟಕಗಳ ಒಂದು ಅಧ್ಯಯನ"

೨೦೦೮-೦೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

ನಿಬಂಧಕಾರರು

**ವಿಜಯಕುಮಾರ**
ಕನ್ನಡ ಎಂ.ಫಿಲ್ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು



ಮಾರ್ಗದರ್ಶಕರು

**ಡಾ. ಮಳಲಿ ವಸಂತಕುಮಾರ್**
ನಿವೃತ್ತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು



**ಕನ್ನಡ ವಿಶ್ವವಿದ್ಯಾಲಯ, ಹಂಪಿ**
೨೦೦೮-೦೯

## ದೃಢೀಕರಣಪತ್ರ

೨೦೦೮–೦೯ನೇ ಸಾಲಿನಲ್ಲಿ ಕ್ರಮ ಸಂಖ್ಯೆ KVTMKS - 00319 ರ ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ವಿಜಯಕುಮಾರ ಅವರು ನನ್ನ ಮಾರ್ಗದರ್ಶನದಲ್ಲಿ **"ದೇಜಗೌ ಅವರ ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ : ಎರಡು ಐತಿಹಾಸಿಕ ನಾಟಕಗಳು ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಮಳಲಿ ವಸಂತಕುಮಾರ್)
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

ಮೈಸೂರು
ದಿನಾಂಕ: ೧೪-೬-೨೦೦೯

# ಅಭ್ಯರ್ಥಿಯ ಘೋಷಣಾಪತ್ರ

**"ಡಾ. ದೇಜಗೌ ಅವರ ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ : ಎರಡು ಐತಿಹಾಸಿಕ ನಾಟಕಗಳ ಒಂದು ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ KVTMKS - 00319ರ ವಿದ್ಯಾರ್ಥಿಯಾದ ನಾನು ೨೦೦೮–೦೯ನೇ ಸಾಲಿನ ಪರೀಕ್ಷೆಗಾಗಿ **ಡಾ. ಮಳಲಿ ವಸಂತಕುಮಾರ್** ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ವಿಜಯಕುಮಾರ)**
೨೦೦೮–೦೯ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮೈಸೂರು
ದಿನಾಂಕ : ೧೨-೬-೨೦೦೯

# ಪ ರಿ ವಿ ಡಿ



*****

# ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಐತಿಹಾಸಿಕ ನಾಟಕಗಳಲ್ಲಿ ಇತಿಹಾಸ ಪ್ರಸಿದ್ಧ ಸಂಗತಿಗಳು, ವ್ಯಕ್ತಿಗಳು, ಸನ್ನಿವೇಶಗಳು ಹಾಗೂ ಮಹತ್ವದ ವಿಷಯ ವ್ಯಾಪ್ತಿಯನ್ನು ತನ್ನ ಒಡಲಲ್ಲಿ ವಿಷಯವಾಗಿರಿಸಿಕೊಂಡು ರಚನೆ ಮಾಡಲಾಗಿರುತ್ತದೆ. ಕನ್ನಡಕ್ಕೆ ಐತಿಹಾಸಿಕ ನಾಟಕ ಬಂದಿದ್ದು ಪಾಶ್ಚಾತ್ಯರಿಂದ. ಅವರು ರಚಿಸಿದ ಸಾಹಿತ್ಯ, ಪ್ರಭಾವ ಪ್ರೇರಣೆಯಿಂದೊಡೆದ ಬೀಜ ಇಂದು ಸಸಿಯಾಗಿ ಬೆಳೆಯುತ್ತಿರುವುದು ಮಹತ್ವದ ಸಂಗತಿ. ಅಲ್ಲದೆ ಸಾಂಸ್ಕೃತಿಕ ನಾಟಕ ಸಾಹಿತ್ಯವು ಕನ್ನಡದಲ್ಲಿ ನಾಟಕ ರಚನೆಯಾಗಲು ಪ್ರಭಾವಬೀರಿದೆ. ಇವಲ್ಲದೆ ಇನ್ನು ಅನೇಕ ಸಂಗತಿಗಳು, ವಿಷಯಗಳು, ಕನ್ನಡ ನಾಟಕ ರಚನೆಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣವಾಗಿದೆ. ಇಂದು ಇವುಗಳ ಅಧ್ಯಯನ ಮಾಡುವ ಅವಶ್ಯಕತೆಯಿದೆ.

ಕನ್ನಡ ಸಂಸ್ಕೃತಿಗೆ ಅಂತಸ್ಸತ್ವವಿದೆ. ಉತ್ಕೃಷ್ಟ ಪರಂಪರೆಯಿದೆ, ಹಲವು ಶತಮಾನಗಳ ಅವಧಿಯಲ್ಲಿ ಸುಂದರವಾದದ್ದನ್ನು, ಸತ್ಯವಾದದ್ದನ್ನು ಮೈಗೂಡಿಸಿಕೊಂಡ ಈ ಸಂಸ್ಕೃತಿ ಇಂದು ಸೊಂಪಾಗಿ ಬೆಳೆದು ನಿಂತಿದೆ. ಹಳತನ್ನು ಮರೆಯದೆ ಹೊಸತನ್ನು ಅಲಕ್ಷಿಸದೆ ಉತ್ತಮ ಅಂಶಗಳನ್ನು ತನ್ನದಾಗಿಸಿಕೊಂಡು ಕರ್ನಾಟಕ ಸಂಸ್ಕೃತಿ ವಿಶಿಷ್ಟ ಘನತೆಯನ್ನು ಭವ್ಯತೆಯನ್ನು ಕಾಪಾಡಿಕೊಂಡು ಬಂದಿದೆ. ಜನರ ಬಾಳ್ವೆಯ ಬಗೆಗೆ, ಅವರ ಮೌಲ್ಯದ ಬಗೆಗೆ, ಅನುಸರಿಸಿದ ಆಚಾರ-ವಿಚಾರ, ನಮ್ಮ ಸಾಹಿತ್ಯ ಕಲಾಪ್ರಕಾರಗಳಲ್ಲಿ ಅಚ್ಚಳಿಯದೆ ಪ್ರತಿಬಿಂಬಿಸಿದೆ. ಅಂದು ಕಲೆ, ಸಾಹಿತ್ಯ, ಸಂಸ್ಕೃತಿ ಸಂವರ್ಧನೆಗೆ ರಾಜರ ಆಶ್ರಯ ಪ್ರಮುಖವಾಗಿತ್ತು, ಅವರ ಸಂಕಲ್ಪ ವಿಶಿಷ್ಟ-ವಾಗಿತ್ತು. ಇವುಗಳನ್ನು ಸಾಹಿತ್ಯದಲ್ಲಿಂದು ಪ್ರತಿಬಿಂಬಿಸಬೇಕಾಗಿದೆ.

ಇತಿಹಾಸದಲ್ಲಿನ ಅನೇಕ ಸಂಗತಿಗಳು ವ್ಯಕ್ತಿಗಳಿಂದ ಹಲವು ಉತ್ತಮ ಅಂಶಗಳನ್ನು ಸ್ವೀಕರಿಸಲು ಯೋಗ್ಯವಾಗಿದೆ. ಅಶೋಕನ ಅಹಿಂಸಾ ನೀತಿ, ಮಯೂರವರ್ಮನಿಗೆ ನಾಡಿನ ಬಗೆಗಿದ್ದ ಅಭಿಮಾನ ಮತ್ತು ಕಾಳಜಿ, ವಿಜಯನಗರದ ಕಲಾ ಮತ್ತು ಸಾಹಿತ್ಯ ವೈಭವ, ಹೊಯ್ಸಳರ ದೇವಾಲಯಗಳ ರಚನಾ ಶೈಲಿ ಮತ್ತು ವಿನ್ಯಾಸ ಮುಂತಾದವನ್ನು ನಾವಿಂದು ಸ್ವೀಕರಿಸಬೇಕಾಗಿದೆ. ಅವರ ರಾಜಕೀಯ ತತ್ವ, ಸೈನಿಕ ನೀತಿ, ಕಲೆ, ಸಾಮಾಜಿಕ ಜೀವನ ಮುಂತಾದವುಗಳು ನಮಗಿಂದು ಅನುಕರಣೀಯವಾಗಿವೆ. ಹೀಗಾಗಿ ಇತಿಹಾಸದ ಅಧ್ಯಯನ ಅವಶ್ಯಕವಾಗಿದೆ.

ಕನ್ನಡ ಭಾಷೆ-ಸಾಹಿತ್ಯ, ಕಲೆ-ಸಂಸ್ಕೃತಿ, ಸಮಾಜಿಕ ಬದುಕು ಇವುಗಳೊಂದಿಗೆ ನಿರಂತರ ಸಂಬಂಧ ಬೆಳೆಸಿಕೊಂಡಿರುವ ದೇಜಗೌರವರು ಇವುಗಳ ಉಳಿವಿಗಾಗಿ

ಹಿಂದಿನಿಂದಲೂ ಅವಿರತವಾದ ಹೋರಾಟ ನಡೆಸಿಕೊಂಡು ಬಂದಿದ್ದಾರೆ. ಇಂದು ಕನ್ನಡ ನಾಡಿಗೆ ಮತ್ತು ಭಾಷೆಗೆ ಅವರ ಕೊಡುಗೆ ಎಂದರೆ ಅವರ ನಿರಂತರ ಹೋರಾಟ, ಉಪವಾಸ ಸತ್ಯಾಗ್ರಹಗಳು ಹಾಗೂ ಎಡೆಬಿಡದ ಛಲದಿಂದಾಗಿ ಸಾವಿರಾರು ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನವನ್ನು ದೊರಕಿಸಿಕೊಟ್ಟುದಾಗಿದೆ. ಇದರಿಂದಾಗಿ ಕನ್ನಡ ಭಾಷೆಗೆ ಸಂದಬೇಕಾದ ಗೌರವ ಸಿಕ್ಕಂತಾಗಿದೆ. ಇವರು ಮಾಡುವ ಯಾವುದೇ ಕೆಲಸಗಳ ಬಗ್ಗೆ ಶ್ರಮ ಹಾಗು ಮುತುವರ್ಜಿ ವಹಿಸಿ ಮುಗಿಸುವ ತನಕ ನಾಡೋಜ ದೇಜಗೌರವರ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ.

ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ ನಾಟಕಗಳೆರಡು ಇತಿಹಾಸ ಪ್ರಸಿದ್ಧ ವ್ಯಕ್ತಿಗಳ, ಬದುಕಿನ ಕಥೆಯನ್ನು, ಅವರ ತತ್ತ್ವಾದರ್ಶಗಳನ್ನು ಆಧರಿಸಿ ರಚಿಸಿದ ನಾಟಕಗಳು. ಹರಳಯ್ಯನು ಬಸವಣ್ಣನ ಅನುಯಾಯಿ ಹಾಗು ಆತನ ತತ್ವಗಳ ಪ್ರತಿಪಾದಕ ಬಸವಣ್ಣನ ವಚನಗಳು ಬದುಕಿನ ಒಟ್ಟಾರೆ ಸಾರವನ್ನು ತಿಳಿಸುವಂತವು. ಅದೇ ರೀತಿ ಶಾಂತಲಾ ನಾಟಕದ ಶಾಂತಲೆ ಜಗತ್ ಪ್ರಸಿದ್ಧ ನಾಟ್ಯಸರಸ್ವತಿ, ರಾಜಕೀಯ ಚತುರೆ, ವಿಷ್ಣುವರ್ಧನನಾದರೋ ಸರ್ವಧರ್ಮ ಸಮನ್ವಯ ತತ್ವದ ಅನುಸಾರಕ ಹಾಗು ಉತ್ತಮ ಆಡಳಿತಗಾರ, ಕನ್ನಡ ನಾಡಿನ ಬಗೆಗೆ ಅಪಾರ ಗೌರವ ಅಭಿಮಾನ ಇಟ್ಟುಕೊಂಡು ಅದರ ಉಳಿವಿಗೆ ಹೋರಾಡಿದಂತಹ ವ್ಯಕ್ತಿ. ಹಾಗಾಗಿ ಮೇಲಿನ ಎರಡೂ ನಾಟಕಗಳು ಅಧ್ಯಯನಕ್ಕೆ ಯೋಗ್ಯವಾಗಿವೆ. ಅಲ್ಲದೆ ಎರಡು ನಾಟಕಗಳನ್ನು ತೌಲನಿಕವಾಗಿ ನೋಡುವ ಪ್ರಯತ್ನವು ನಡೆದಿದೆ.

ನನ್ನ ಈ ಅಧ್ಯಯನದ ಮುಖ್ಯ ಉದ್ದೇಶ ಎರಡು ನಾಟಕಗಳು ಕಂಡುಬರುವಂತಹ ಸಮಕಾಲೀನ ಅಂಶಗಳನ್ನು ಗುರುತಿಸಿ ಚಾರಿತ್ರಿಕ ಮಹತ್ವವನ್ನು ಎರಡರಲ್ಲೂ ಗುರುತಿಸುವ ಪ್ರಯತ್ನ ಮಾಡುವುದೇ ಆಗಿದೆ. ಹಾಗಾಗಿ ಆ ಬಗೆಯಲ್ಲಿ ಚರ್ಚಿಸಲು "ಸಮಕಾಲೀನವಾಗ ಮತ್ತು ಚಾರಿತ್ರಿಕವಾಗಿ ನಾಟಕಗಳೆರಡರ ಪ್ರಸ್ತುತತೆ" ಎಂಬ ಅಧ್ಯಾಯವನ್ನು ಮಾಡಿಕೊಳ್ಳಲಾಗಿದೆ. ಈ ಕುರಿತು ಆ ಭಾಗದಲ್ಲಿ ಚರ್ಚಿಸಲಾಗಿದೆ. ಅಲ್ಲದೆ ಆಧುನಿಕ ಕನ್ನಡ ನಾಟಕಗಳು ಮಹತ್ವತೆಯಿಂದ ಕೂಡಿದ್ದಾಗಿದೆ. ಕನ್ನಡದಲ್ಲೂ ಪ್ರಭಾವಿ ಐತಿಹಾಸಿಕ ನಾಟಕಕಾರರನ್ನು ಗುರುತಿಸಬಹುದಾಗಿದೆ. ಮುಖ್ಯವಾಗಿ ಸಂಸ, ಎಂ.ಆರ್.ಶ್ರೀನಿವಾಸಮೂರ್ತಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕುವೆಂಪು, ರಂ.ಶ್ರೀ, ಮುಗಳಿ ಮುಂತಾದ ಐತಿಹಾಸಿಕ ನಾಟಕಕಾರರನ್ನಿಟ್ಟುಕೊಂಡು ಅವರ ಮುಖ್ಯ ನಾಟಕಗಳ ವಸ್ತು, ರಚನೆ, ತಂತ್ರ, ಶೈಲಿ ಮುಂತಾದವುಗಳನ್ನು ಕುರಿತು ಸ್ಥೂಲವಾಗಿ ನೋಡುವ ಪ್ರಯತ್ನ ಮಾಡಲಾಗಿದೆ.

ಈ ನಾಟಕಗಳಲ್ಲಿನ ಅನೇಕ ಸಂಗತಿಗಳು ಪ್ರಸ್ತುತವಾಗಿ ಅನೇಕ ಅಂಶಗಳನ್ನು ಪ್ರತಿಬಿಂಬಿಸುತ್ತವೆ. ಅಂತಹ ಸಂಗತಿಗಳನ್ನು ಗಮನಿಸಿ ಅವುಗಳನ್ನು ಸಮಕಾಲೀನ ಮತ್ತು ಚಾರಿತ್ರಿಕ ಹಿನ್ನೆಲೆಯಿಂದ ಅಧ್ಯಯನ ಮಾಡುವುದು ಮುಖ್ಯ ಉದ್ದೇಶವಾಗಿದೆ. ಈ ನಾಟಕಗಳಲ್ಲಿ ಅನೇಕ ಸಂದರ್ಭದಲ್ಲಿ ಸ್ತ್ರೀ ಸಂವೇಧನೆಯ ಅಂಶಗಳೂ ಇವೆ. ಅಂತಹ ಸಂಗತಿಗಳ ಸ್ಥೂಲ ಅಧ್ಯಯನವನ್ನು ಮಾಡಲಾಗಿದೆ. ಶಾಂತಲೆ, ಮಯೂರಿ, ಅಕ್ಕಮಹಾದೇವಿ, ಮುಕ್ತಾಯಕ್ಕ ಅಮುಗೆ ರಾಯಮ್ಮ ಮುಂತಾದ ವ್ಯಕ್ತಿಗಳು ಆ ಹಿನ್ನೆಲೆಯಲ್ಲಿ ಕಂಡುಬರುತ್ತಾರೆ.

ಜ್ಞಾನವೃದ್ಧರಾದ ದೇಜಗೌರವರು ತಮ್ಮ ಅನುಭವ ಗುಚ್ಚದಿಂದ ಹೆಕ್ಕಿ ತೆರೆದ ರಚನೆಯಂತೆ 'ಹೊಯ್ಸಳೇಶ್ವರಿ ಶಾಂತಲಾ" ಮತ್ತು "ಹರಳಯ್ಯನ ವಿಜಯ" ನಾಟಕಗಳನ್ನು ರಚಿಸಿದ್ದಾರೆ. ಇವುಗಳು ಉತ್ತಮ ಶೈಲಿ, ಭಾಷೆಯಿಂದ ಕೂಡಿವೆ. ಇವುಗಳನ್ನು ರಂಗದ ಮೇಲೆ ತರುವಂತಹ ಅವಶ್ಯಕತೆ ಇದೆ. ಓದುಗರು ತಮ್ಮ ದಾಹವನ್ನು ಇಂಗಿಸಿಕೊಳ್ಳಲು ಈ ನಾಟಕಗಳ ಓದು ಅವಶ್ಯಕವಾಗಿದೆ.

ಈ ಸಂಪ್ರಬಂಧದ ಕೊನೆಯ ಭಾಗದಲ್ಲಿ ಲೇಖಕರೊಂದಿಗೆ ನೇರವಾಗಿ ಸಂವಾದಿಸಿ ಹಲವು ಭಾಗವನ್ನು ಸೇರಿಸಲಾಗಿದೆ. ಆ ಎಲ್ಲ ಪ್ರಶ್ನೆಗಳಿಗೂ ಲೇಖಕರು ಮುಕ್ತ ಮನಸ್ಸಿನಿಂದ ಉತ್ತರವನ್ನು ನೀಡಿರುತ್ತಾರೆ.

# ಅಧ್ಯಾಯ – ಎರಡು

## ಕನ್ನಡ ನಾಟಕ ಪರಂಪರೆ ಒಂದು ನೋಟ

'ನಟನ ಪ್ರದರ್ಶನಕ್ಕಾಗಿ ಸಿದ್ಧವಾದಂತಹ ಒಂದು ಸಾಹಿತ್ಯ ಪ್ರಕಾರವೇ ನಾಟಕ. ಇದು ಸಹೃದಯನ ಭೌತಿಕ ಸಾಧ್ಯತೆಗಳನ್ನು ಅನುಸರಿಸಿ ನಿಗದಿತ ಸಮಯದಲ್ಲಿ ನೋಡಿ ಮುಗಿಸುವಂತದ್ದೇ ಆಗಿದೆ. ಭಾರತೀಯ ಮತ್ತು ಪಾಶ್ಚಾತ್ಯರಲ್ಲಿ ನಾಟಕ ಪ್ರಕಾರ ಪ್ರಮುಖವಾದ ಸ್ಥಾನವನ್ನು ಪಡೆದಿದೆ. ನಾಟಕ ಪರಂಪರೆ ಭಾರತದಲ್ಲಿ ಭರತನಿಂದ ಆರಂಭವಾದರೆ ಪಾಶ್ಚಾತ್ಯರಲ್ಲಿ ಅರಿಸ್ಟಾಟಲ್ ಕಾರಣಕರ್ತನಾಗುತ್ತಾನೆ. ಭರತನ 'ನಾಟಕಶಾಸ್ತ್ರ'ವು ನಾಟಕದ ಲಕ್ಷಣ ಸ್ವರೂಪವನ್ನು ಹೇಳಿದರೆ ರುದ್ರನಾಟಕದ ಪರಿಕಲ್ಪನೆ ಅರಿಸ್ಟಾಟಲ್‌ನಿಂದ ಬಂದಂತದ್ದು.

'ಕಾವ್ಯೇಷ್ಟು ನಾಟಕಂ' ಎಂಬುದು ಭರತ ಭೂಮಿಯಲ್ಲಿ ಪ್ರಸಿದ್ಧ ಮಾತು. ಕಾಳಿದಾಸನು ನಾಟಕ ಪ್ರಕಾರವನ್ನು 'ಶಾಂತಾಂ ಕ್ರತುಂ ಚಾಕ್ಷುಷಂ" – ಕಣ್ಣು ಕುಡಿದು ತೃಪ್ತಿಗೊಳ್ಳಬಲ್ಲ ಯಜ್ಞ ಎಂದು ಹೊಗಳಿದ್ದಾನೆ. ನಾಟಕ ಒಂದು ಸಂಕೀರ್ಣಕಲೆ ಇಲ್ಲಿ ಆಂಗಿಕ ಅಭಿನಯ, ಪಾತ್ರ ಪೋಷಣೆ, ಸಂವಿಧಾನ, ರಂಗಪರಿಕರ, ಸಂಗೀತ, ಮೇಳ ಮುಂತಾದವುಗಳನ್ನು ಸರಿಯಾಗಿ ರೂಢಿಸಿಕೊಳ್ಳಬೇಕು. ಇಲ್ಲಿ ಮುಖ್ಯವಾಗಿ ಸಹೃದಯರ ಅಭಿರುಚಿಗೆ ಅನುಗುಣವಾಗಿ ನಾಟಕದ ವಸ್ತು, ತಂತ್ರ, ಶೈಲಿ, ಬಳಕೆಯಾಗಬೇಕು. ಸಾಮಾಜಿಕ ವಸ್ತು–ವಿಷಯಗಳಾದ ಕೌಟುಂಬಿಕ ಕಲಹ, ಪ್ರೇಮ, ಮತ್ಸರ, ಸುಖಾಂತಗಳಿಂದ ಕೂಡಿದ ನಾಟಕ ಕಲೆ ನಂತರ ಓದುವ ವರ್ಗವನ್ನು ಕಂಡುಕೊಂಡಿದ್ದರಿಂದ ಪಾರಾಣಿಕ ವೃತ್ತಿ, ಹವ್ಯಾಸ, ರಂಗಭೂಮಿಗಳು ಅಭಿವೃದ್ಧಿ ಹೊಂದಿ ಬಾನುಲಿ, ಬೀದಿ ನಾಟಕಗಳ ವರೆಗೆ ಕ್ರಮ ಕ್ರಮವಾಗಿ ಬೆಳೆದಿದೆ.

**ನಾಟಕದ ಸ್ವರೂಪ ಮತ್ತು ಲಕ್ಷಣ**

"ವಾಮನನು ಸಂದರ್ಭೇಷು ದಶರೂಪಕಂ ಕ್ರಿಯಃ" ಪ್ರಬಂಧಗಳಲೆಲ್ಲಾ ನಾಟಕಗಳೇ ಶ್ರೇಷ್ಠ ಎಂದಿದ್ದಾನೆ. ಸಾಹಿತ್ಯದಲ್ಲಿ ಸೌಂದರ್ಯಕ್ಕೆ ಕಾರಣಭೂತವಾಗ–ಬಹುದಾದ ಕಥೆ, ಅಭಿನಯ, ಸಂಗೀತ, ರಸ, ಭಾವವಾಗಿದೆ. ಇತ್ಯಾದಿ ಅಂಶಗಳಲೆಲ್ಲಾ ನಾಟಕದಲ್ಲಿ ರಮ್ಯ ಸಮನ್ವಯವನ್ನು ಪಡೆದಿರುವುದೇ ಈ ಶ್ರೇಷ್ಠತೆಗೆ ಕಾರಣವೆಂದು ಆತನ ಅಭಿಪ್ರಾಯ"[1]

ನಾಟಕ ಎಂದರೆ ಅಭಿನಯಿಸಿ ತೋರಿಸುವುದು. ಅಭಿನಯವೇ ನಾಟಕ. ಅಭಿನಯ ಎಂಬುದಕ್ಕೆ ಭರತಮುನಿ "ಅನುಕರಣ" ಎಂಬ ಪರ್ಯಾಯ ಪದವನ್ನು ಬಳಸಿದ್ದಾನೆ. ಅವನ ಪ್ರಕಾರ ಅನುಕರಣವೇ ನಾಟಕ. ನಾಟಕವು ಒಂದು

ಕಲೆಯಾದುದರಿಂದ ಅದು ರಸಾಶ್ರಯವಾಗುವಂತೆ ಇರುವ ಅನುಕರಣ ಮಾತ್ರ ನಾಟಕವಾಗಬಲ್ಲದು.

ನಾಟಕವು ಹಲವು ಅಂಗ ಮತ್ತು ಉಪ ಅಂಗಗಳನ್ನು ಹೊಂದಿದೆ. ವಸ್ತು, ಸಂವಿಧಾನ, ಪಾತ್ರ, ಅದರ ಒಳ ಅಂಗಗಳು. ಭರತ ಮುನಿಯ ಈ ಕುರಿತು ಪ್ರಸ್ತಾಪ ಮಾಡಿದ್ದಾನೆ. ರಂಗಮಂಟಪ, ನಟರು ಮತ್ತು ಪ್ರೇಕ್ಷಕರು ಅದರ ಹೊಸ ಅಂಗಗಳು.

**ವಸ್ತು:-** ನಾಟಕದ ಮುಖ್ಯ ಅಂಗವೇ ವಸ್ತು. ವಸ್ತುವಿಲ್ಲದೆ ನಾಟಕದ ಅಸ್ತಿತ್ವವೇ ಇಲ್ಲ. ನಾಟಕದಲ್ಲಿ ಪ್ರಸಿದ್ಧ, ಕಲ್ಪಿತ, ಮಿಶ್ರ ಎಂದು ಮೂರು ವಿಭಾಗ ಮಾಡಬಹುದು. ರಾಮಾಯಣ, ಮಹಾಭಾರತ, ಬೃಹತ್ಕಥೆ ಇತ್ಯಾದಿ ಸುಪ್ರಸಿದ್ಧ ಗಾದೆಗಳಲ್ಲಿ ಅಡಕವಾಗಿರುವ ಕಥಾ ಪ್ರಸಂಗಗಳನ್ನು ಆಯ್ದುಕೊಂಡು ನಾಟಕದ ವಸ್ತುವಾಗಿ ಬಳಸಿಕೊಂಡಾಗ ಅದು "ಪ್ರಸಿದ್ಧ" ಇತಿವೃತ್ತ. ಕವಿ ತನ್ನ ಸ್ವಪ್ರತಿಭೆಯಿಂದ ಹೊಸದೊಂದು ನಾಟಕ ಕಥೆಯನ್ನು ಸೃಷ್ಟಿಸಿದಾಗ ಅದು ಕಲ್ಪಿತ, ಪ್ರಸಿದ್ಧ ಕಥೆಯಲ್ಲಿ ಕವಿ ತನ್ನ ಪ್ರತಿಭೆಯಿಂದ ಕೆಲವು ಬದಲಾವಣೆಗಳನ್ನು ಮಾಡಿಕೊಂಡ ಮೂಲ ಕಥೆಯನ್ನು ಮಾರ್ಪಡಿಸಿಕೊಂಡಾಗ ಅದು ಮಿಶ್ರ. ಹೀಗೆ ಮೂರು ಭಾಗಗಳಾಗಿ ವಿಂಗಡಿಸಿರುವುದು ಕೇವಲ ಕವಿಯ ನಿರ್ಮಾಣ ದೃಷ್ಟಿಯಿಂದ. ಆದರೆ ಘಟನೆಗಳ ಮುಖ್ಯಾಮುಖ್ಯತೆಯ ದೃಷ್ಟಿಯಿಂದ ಇತಿವೃತ್ತವನ್ನು ಅಧಿಕಾರಿಕ, ಪ್ರಾಸಂಗಿಕ ಎಂದು ಪಂಗಡಗಳಾಗಿಸಿ-ಕೊಳ್ಳುತ್ತಾರೆ.

ನಾಟಕದ ಪೂವಾರ್ಧದಲ್ಲಿಯೇ ವಿಸ್ತೃತ ವರ್ಣನೆಯನ್ನು ಪಡೆದಿರಬೇಕು. ಉತ್ತರಾರ್ಧದಲ್ಲಿ ಹೆಚ್ಚು ವಿವರ ಬೇಕಿಲ್ಲ. ಕಾರಣ ಪ್ರೇಕ್ಷಕರು ಮೊದಮೊದಲು ವಿಸ್ತರಣೆಯನ್ನು ಸಹಿಸಿದರೂ ಕಡೆಯಲ್ಲಿ ಅವರಿಗೆ ಸಹನೆ ಇರದು. ಅಲ್ಲದೆ ನಾಟಕದ ಅಂತ್ಯ ಅದ್ಭುತ ರಸದೊಡನೆ ಅಂತ್ಯವಾಗಬೇಕು. "ಕೋಟೆ, ಯುದ್ಧ, ಮುಂತಾದ ರಂಗ ನಿಷೇಧಗಳು ಈಗಾಗಲೇ ನಾಟಕಕಾರರಿಂದ ತ್ಯಾಜ್ಯಗೊಂಡಿದೆ.ಅನೇಕ ನಾಟಕಕಾರರು ಈ ಬಗೆಯ ಕಟ್ಟುಪಾಡುಗಳಿಗೆ ಒಳಗಾಗದೆ ಅವಶ್ಯಕತೆ ಬಂದಾಗ ಅವುಗಳನ್ನು ರಂಗದ ಮೇಲೆ ತಂದು ಯಶಸ್ಸನ್ನು ಸಾಧಿಸಿರುವ ನಿದರ್ಶನಗಳು ಸಾಕಷ್ಟಿವೆ."[೨]

**ಪಾತ್ರಗಳು:-** ನಾಟಕದಲ್ಲಿ ಸಂದರ್ಭ ಮತ್ತು ಕಥೆಯನುಸಾರ ಅನೇಕ ಪಾತ್ರಗಳು ಇರುತ್ತವೆ. ಇಲ್ಲಿ ನಾಯಕನ ಪಾತ್ರವೇ ಮುಖ್ಯ ಮಹಾಪುರುಷರ ಗುಣಗಳೆಲ್ಲ ನಾಯಕನಲ್ಲಿರಬೇಕು. ಪ್ರಣಯ ಪ್ರಪಂಚದ ನಾಯಕನಾದರೆ ಅವನು "ಧೀರಲಲಿತ" ಉದಾತ್ತ ಧ್ಯೇಯಗಳಾಗಿ ಸಾಹಸ ಮಾಡುವವನಾದರೆ 'ಧೀರೋದ್ಧಾತ' ಉದಾತ್ತ ಧ್ಯೇಯವಾವುದೂ ಇಲ್ಲದೆ ಕೋಪಾಟೋಪಗಳೂ ಆತ್ಮಪ್ರಶಂಸೆ ಹೆಚ್ಚಾಗಿರುವವನು ಧೀರೋದ್ಧಾತ. ಇವರೆಲ್ಲರೂ ಅತಿಮಾನುಷ ವ್ಯಕ್ತಿಗಳು, ಸಾಮಾನ್ಯ ಮನುಷ್ಯನು

ನಾಯಕನಾಗುವ ಸಂದರ್ಭದಲ್ಲಿ ಅವನು ಪ್ರಶಾಂತ ಗುಣವುಳ್ಳವನಾಗಿದ್ದು ಧೀರಶಾಂತ-ನಾಗುತ್ತಾನೆ.

ಸ್ತ್ರೀ ಪಾತ್ರದಲ್ಲಿ ನಾಯಕಿ ಪ್ರಮುಖಳು. ಇವರಲ್ಲಿ ಸ್ತ್ರೀಯೆ, ಅನ್ಯೆ, ಸುಧಾರಣೆ ಎಂಬ ಮೂರು ಬಗೆ. ಇದಲ್ಲದೆ ವಿಟಚೇಟ ವಿದೂಷಕ ಮಂತ್ರಿ ಕಿರಾತ, ಋಷಿ ಮುಂತಾದ ನಾಯಕನ ಸಹಾಯ ಪಾತ್ರಗಳು. ಸಖಿ, ದಾಸ, ಸನ್ಯಾಸಿನಿ ಮೊದಲಾದವರನ್ನು ನಾಯಕಿಯ ಸಹಾಯಕರನ್ನಾಗಿಯೇ ಹೇಳುತ್ತಾರೆ. ಇಲ್ಲಿ ಪಾತ್ರಗಳು ನಾಯಕನಿಗೆ ಪೋಷಕವಾದ ಪಾತ್ರಗಳಾಗಿರುತ್ತವೆ.

**ಸಂವಿಧಾನ:–** ನಾಟಕದಲ್ಲಿ ವಸ್ತು, ಪಾತ್ರಗಳಂತೆಯೇ ಸಂವಿಧಾನಕ್ಕು ಮಹತ್ವದ ಸ್ಥಾನವಿದೆ. ಪ್ರತ್ಯೇಕವಾಗಿ ಚದುರಿಬಿದ್ದ ವಸ್ತುಗಳಿಂದ ಒಂದು ಆಕೃತಿ ನಿರ್ಮಾಣ-ವಾದಾಗಲೇ ಅಂದ ಮತ್ತು ಅದಕ್ಕೊಂದು ಬೆಲೆ. ನಾಟಕದಲ್ಲಿ ಆ ಕೆಲಸವನ್ನು ಸಂವಿಧಾನ ಮಾಡುತ್ತದೆ. ಕಥೆಯು ಮುಂದುವರೆಯುವುದೇ ಅದರ ಕಾರ್ಯದಲ್ಲಿ ಹೊಂದಾಣಿಕೆ ಕಂಡುಬರುವುದು ಸಂವಿಧಾನದಿಂದ.

**ಸಂವಿಧಾನದಲ್ಲಿ ಮೂರು ಸಂಯೋಜಕ ತತ್ವಗಳಿವೆ**

೧) ಕಾರಣ ಪರಿಣಾಮ ಸಂಬಂಧ

೨) ಪ್ರತಿಮಾ ಸಂಬಂಧ

೩) ನೈತಿಕ ಸಂಬಂಧ

**ಸಂಕೀರ್ಣ ಸಂವಿಧಾನದಲ್ಲಿ**

೧) ಶಕ್ತಿ

೨) ಪ್ರಶಕ್ತಿ

ನಾಟಕದಲ್ಲಿ ಆರಂಭದಿಂದ ಅಂತ್ಯದವರೆಗಿನ ಏಕಮುಖ ಕ್ರಿಯೆಯು ಶಕ್ತಿ ಎಂದೂ ಬದಲಿತ ಕ್ರಿಯಾರೂಪವನ್ನು ಪ್ರಶಕ್ತಿ ಎಂದೂ ಕರೆಯಲಾಗುವುದು.

**ಅಭಿನಯ:** ಒಂದು ನಾಟಕದ ಯಶಸ್ಸಿಗೆ ನಟರ ಪಾತ್ರ ಮುಖ್ಯ. ನಾಟಕದಲ್ಲಿ ನಟಿಸುವವರೆ ನಟರು, ಈ ನಟನೆಯನ್ನು ಅಭಿನಯವೆಂದು ಕರೆಯಬಹುದು. ನಾಟಕದಲ್ಲಿ ನಟರೇ ಕೇಂದ್ರ ಬಿಂದು. ಒಂದು ಕಳಪೆಯ ನಾಟಕವನ್ನು ತಮ್ಮ ನಟನಾ ಕೌಶಲದಿಂದ ಉತ್ತಮ ನಾಟಕವಾಗಿಸುವ ಶಕ್ತಿ ನಟರಿಗಿದೆ. ನಾಟಕದಲ್ಲಿ ವಸ್ತುವಿಗೆ ತಕ್ಕಂಥ ನಾಟಕವನ್ನು ಆರಿಸಿಕೊಳ್ಳುವ ಕ್ರಮವೂ ಇದೆ.

ಕಂಪನಿ ನಾಟಕಗಳು ಇದಕ್ಕೆ ಒಳ್ಳೆಯ ಉದಾಹರಣೆ. ನಾಟಕಕಾರ, ನಟವರ್ಗ ಪ್ರೇಕ್ಷಕರು, ಈ ಮೂವರ ನಡುವೆ ಒಂದು ಸಂಬಂಧವಿರುತ್ತದೆ. ಉತ್ತಮ ಪಾತ್ರ

ನಿರ್ವಹಣೆಯಿಂದ ಅರಸಿಕನಲ್ಲೂ ರಸಿಕತೆಯನ್ನು ತರುವುದು ಸಾಧ್ಯವಾಗುತ್ತದೆ. ನಾಟಕಕಾರರಿಂದಲೇ ಹೆಚ್ಚು ನಾಟಕಗಳು ಯಶಸ್ಸು ಕಾಣುವ ಸಾಧ್ಯತೆಯು ಉಂಟು. ಗರುಡ ಸದಾಶಿವಚಾರ್ಯರು, ವರದಚಾರ್ಯರು, ಗುಬ್ಬಿವೀರಣ್ಣ, ಪುಟ್ಟಸ್ವಾಮಯ್ಯ, ನಟಭಯಂಕರ, ಗಂಗಾಧರಯ್ಯ ಇಂತಹವರು ಉತ್ತಮ ಪಾತ್ರ ನಿರ್ವಹಣೆ ಮಾಡಿದ್ದಾರೆ ಎಂಬುದು ಮುಖ್ಯವಾದ ಸಂಗತಿ.

ನಾಟಕದಲ್ಲಿನ ನಟರು ಮುಖ್ಯವಾದ ಕೆಲವು ಲಕ್ಷಣ ಹೊಂದಿರಬೇಕು. ನಟನಾ ಕೌಶಲ ಮಾತಿನ ಸ್ಪಷ್ಟ ಶೈಲಿ, ಉಚ್ಚಾರಣೆ, ಭಾವುಕತೆ, ದೈಹಿಕ ಮೈಕಟ್ಟು, ಮುಖ್ಯವಾಗಿ ಸೌಂದರ್ಯ. ನಿರಂತರ ಅಭ್ಯಾಸ ಮತ್ತು ಶ್ರಮ ಅದರಲ್ಲಿ ಇರಬೇಕಾಗುತ್ತದೆ; ಆಗ ನಾಟಕದ ಅರ್ಥ ಯಶಸ್ಸು ಸಿಕ್ಕಂತೆಯೇ.

**ರಂಗಭೂಮಿ:** ನಾಟಕ ಪ್ರದರ್ಶನವಾಗುವ ವೇದಿಕೆಯೇ ರಂಗಸ್ಥಳ ಅಥವಾ ರಂಗಭೂಮಿ. ಮೊದಲು ರಂಗಭೂಮಿಗೆ ಅಷ್ಟು ಪ್ರಾಮುಖ್ಯತೆ ಇರಲಿಲ್ಲ. ಒಂದು ನಾಟಕ ರಂಗಭೂಮಿಯಲ್ಲಿ ಯಶಸ್ಸನ್ನು ಪಡೆಯದೆ ಹೋದರೆ ಆ ನಾಟಕ ತನ್ನ ಪ್ರಾಮುಖ್ಯತೆ ಕಳೆದುಕೊಳ್ಳುತ್ತದೆ. ಸಾಹಿತ್ಯ ಕೃತಿಯನ್ನು ರಂಗಕೃತಿಯನ್ನಾಗಿ ಮಾರ್ಪಾಡು ಮಾಡಿ ವೇದಿಕೆ ಮೇಲೆ ನಾಟಕವಾಗಿ ಪ್ರಯೋಗ ಮಾಡುವವನೆ ನಿರ್ದೇಶಕ.

"ರಂಗಭೂಮಿ ಎಂದರೆ ಅದು ಕೇವಲ ವೇದಿಕೆಯಷ್ಟೆ ಅಲ್ಲ. ವಾಸ್ತವವಾಗಿ ಅದು ರಂಗಸ್ಥಳ, ರಂಗಶಿಲ್ಪ, ರಂಗಚಿತ್ರ, ಪರದೆ ಆಸನಗಳು, ವೇಷಭೂಷಣ, ಬೆಳಕು, ಪ್ರೇಕ್ಷಕರಿಗಾಗಿ ಶಬ್ದವ್ಯವಸ್ಥೆ ಮುಂತಾದವುಗಳನ್ನು ಒಳಗೊಂಡಿರುತ್ತದೆ."[೩]

'ರಂಗಭೂಮಿ' ಎಂದೊಡನೆ ಕುವೆಂಪುರವರು ತಮ್ಮ ಶೂದ್ರತಪಸ್ವಿ ನಾಟಕಕ್ಕೆ ಬರೆದಿರುವ ಮುನ್ನುಡಿಯಲ್ಲಿನ ಮಾತುಗಳು ನೆನಪಿಗೆ ಬರುತ್ತವೆ.

"ಶೂದ್ರತಪಸ್ವಿಯಲ್ಲಿ ಶಂಬೂಕನ ಕಥೆಯ ಸಾಮಾಗ್ರಿ ಹೊಸ ರೀತಿಯಿಂದ ದೃಶ್ಯವಸ್ತುವಾಗಿದೆ. ಈ ನಾಟಕ ಆಡುವ ದೃಷ್ಟಿಯಿಂದ ನಿಷ್ಪ್ರಯೋಜಕ. ಅದರ ಚಿತ್ರಗಳ ಬೃಹತ್ತನ್ನೂ, ಮಹತ್ತನ್ನೂ ಹೊರಗಡೆಯ ಅಲ್ಪವೇದಿಕೆಯ ಮೇಲೆ ಕೃತಕಾಭಿನಯದಿಂದ ಪ್ರದರ್ಶಿಸುವುದು ಅಸಾಧ್ಯ. ಆದ್ದರಿಂದ ಕಲ್ಪನಾ ತಪಸ್ಸಾಧ್ಯವಾದ ಮನೋರಂಗ ಭೂಮಿಯಲ್ಲಿಯೇ ಅದನ್ನು ಸೃಷ್ಟಿಸಿ ದೃಷ್ಟಿಸಬೇಕು. ದೃಶ್ಯರೂಪಿಯಾದರೂ ಅದು ಕಾವ್ಯಾತ್ಮಕವಾದುದು. ದೃಶ್ಯರೂಪಧಾರಣೆ ಮಾಡಿದ ಮಾತ್ರಕ್ಕೆ ಕಾವ್ಯವು ಟಿಕೇಟಿನ ಆಡಳಿತಕ್ಕೆ ಒಳಗಾಗಲೇಬೇಕೆಂಬ ದುರಾಗ್ರಹ ಹಳೆಯ ಪ್ರಯೋಜನದ ಒಂದು ನಿಷ್ಪ್ರಯೋಜಕವೂ ಅವಶೇಷಾತ್ಮಕವೂ ಆಗಿರುವ ಮನಃಸ್ಥಿತಿ ಎಂದೇ ಹೇಳಬೇಕಾಗುತ್ತದೆ. ಮನೋವೇದಿಕೆಯ ಸಜೀವತೆಯ ಮತ್ತು ಶ್ರೀಮಂತತೆಯ

ಮುಂದೆ ಹೊರಗಡೆಯ ನಾಟಕಶಾಲೆ ಒಂದು ದರಿದ್ರ ಪ್ರಯತ್ನವೆಂದೂ ಪ್ರತಿಭಾ ಪ್ರಭುಗಳೆಲ್ಲರಿಗೂ ನಿತ್ಯಾನುಭವವೇದ್ಯ"[೮]

ಕುವೆಂಪುರವರ ಮೇಲಿನ ಮಾತುಗಳಿಂದ ಎಂತಹವರಿಗೂ ಆಶ್ಚರ್ಯ-ವುಂಟಾಗದಿರದು. ರಂಗಭೂಮಿ ಕುರಿತಂತೆ ಇಷ್ಟು ತಾತ್ಸಾರದಿಂದ ಹೇಳಿಕೆ ನೀಡಿದ ಲೇಖಕರು ಕಡಿಮೆ. ಇದು ಕುವೆಂಪುರವರಿಗಿದ್ದ ಆತ್ಮದೃಢತೆ ಮತ್ತು ವಿಶ್ವಾಸವನ್ನು ತೋರಿಸುವಂತದ್ದು. ಈಗಾಗಲೇ ಮೇಲಿನ ಹೇಳಿಕೆ ಕುರಿತಂತೆ ಸಾಕಷ್ಟು ಚರ್ಚೆಯೂ ನಡೆದಿದೆ.

**ಪ್ರೇಕ್ಷಕರು:–** ನಾಟಕದ ಅವಿಭಾಜ್ಯ ಅಂಗ ಪ್ರೇಕ್ಷಕನೆ. ಒಟ್ಟಾರೆ ನಾಟಕದ ಯಶಸ್ಸಿನ ಕಾರಣಕರ್ತ ಹಾಗೂ ನಾಟಕದಲ್ಲಿನ ತಪ್ಪು ಒಪ್ಪುಗಳನ್ನು ತಿಳಿಸುವವನು ಈತನೇ. ನಾಟಕದ ನಿಜವಾದ ವಿಮರ್ಶೆಯ ಕಾರ್ಯ ಪ್ರೇಕ್ಷಕನಿಂದ ನಡೆಯುತ್ತದೆ. ಒಟ್ಟಾರೆ ನಾಟಕವನ್ನು ನೊಡಿ ಮೆಚ್ಚಿಕೊಂಡು ಪ್ರೋತ್ಸಾಹಿಸುವ, ನಾಟಕದಲ್ಲಿನ ಸನ್ನಿವೇಶಗಳನ್ನು ಅರಿತು ಅರ್ಥಮಾಡಿಕೊಂಡು ಅದಕ್ಕನುಸಾರವಾಗಿ ಸಹಜವಾಗಿ ಪ್ರತಿಕ್ರಿಯಿಸುವವ ಪ್ರೇಕ್ಷಕನೇ.

**ರಸ:–** ಕಾವ್ಯವನ್ನು ಓದುವುದರಿಂದ ಅಥವಾ ನಾಟಕವನ್ನು ನೋಡುವುದರಿಂದ ನಮಗಾಗಬಹುದಾದ ಆನಂದಾನುಭವವನ್ನು ಸ್ಥೂಲವಾಗಿ ರಸ ಎಂದೆನ್ನಬಹುದು. ಸರಸ, ನೀರಸ, ವಿರಸ ಇತ್ಯಾದಿ ಪದಗಳೆಲ್ಲಕ್ಕೂ ರಸ ಶಬ್ದವೇ ಮೂಲ. ಭರತಮುನಿ "ರಸಾನಾಂ ಭಾವಾನಾಂ ನಾಟ್ಯಾಶ್ರಿತಾನಾಂ" ಎಂದು ನಾಟಕಗಳ ವಿಚಾರದಲ್ಲಿ ಹೇಳಿದ್ದಾರೆ.

"ವಿಭಾವಾನುಭಾವ ವ್ಯಭಿಚಾರೀ ಸಂಯೋಗಾದ್ರಸ ನಿಷ್ಪತ್ತಿ" ಎಂಬುದು ಭರತನ ಹೇಳಿಕೆ. ಅಂದರೆ ಭಾವ, ವಿಭಾವ, ಅನುಭಾವ ಮತ್ತು ಸಂಚಾರಿಭಾವಗಳ ಸಂಯೋಗದಿಂದ ರಸ ನಿಷ್ಪತ್ತಿಯಾಗುತ್ತದೆ. ಭಟ್ಟಲೊಲ್ಲಟನು ವಿಭಾವ, ಅನುಭಾವ, ಸಂಚಾರೀಭಾವವೇ ರಸ ಎಂದಿದ್ದಾನೆ. ರಸಸೂತ್ರದ ಬೆಳವಣಿಗೆ ಒಂದು ಹಂತದಲ್ಲಿ ಭಾರತೀಯ ಕಾವ್ಯ ಮೀಮಾಂಸೆಯ ಬೆಳವಣಿಗೆಯೂ ಆಗಿದೆ. ಮೇಲಿನ ಮೀಮಾಂಸಕರ ವಿವರಣೆಯಿಂದ ರಸ ಆಸ್ವಾದಿತವಾಗುವಂತಹದ್ದು. ರಸಾತ್ಮಕವಾದದ್ದೇ ನಿಜವಾದ ಕಾವ್ಯ.

**ಕನ್ನಡದಲ್ಲಿ ನಾಟಕಗಳ ಬೆಳವಣಿಗೆ**

ಹತ್ತೊಂಬತ್ತನೆಯ ಶತಮಾನದ ಅಂತಿಮ ಘಟ್ಟವನ್ನು ಮುಟ್ಟುವವರೆಗೂ ಕನ್ನಡ ರಂಗಭೂಮಿಗೆ ಒಂದು ಇತಿಹಾಸವಿರಲಿಲ್ಲ. ಆದರೆ ೧೭ ನೇ ಶತಮಾನದಲ್ಲಿನ ಸಿಂಗರಾರ್ಯನ 'ಮಿತ್ರವಿಂದಾಗೋವಿಂದ'ವು ಬೆಂಗಾಡಿನಲ್ಲಿ ಚಿಗುರಿದ ಗಿಡದಂತೆ

ಹುಟ್ಟಿತು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕೀಯತೆ ಬೇಕಾದಷ್ಟು ಕಂಡುಬರುತ್ತದೆ. ಅಲ್ಪಸ್ವಲ್ಪ ಬದಲಾವಣೆಗಳೊಡನೆ ರನ್ನನ ಗದಾಯುದ್ಧವನ್ನು ಹಲವು ನಾಟಕಕಾರರು ನಾಟಕವಾಗಿ ಪರಿವರ್ತಿಸಿಕೊಂಡಿದ್ದಾರೆ.

ಬಿ.ಎಂ.ಶ್ರೀಯವರು ಕೂಡ ರನ್ನನ 'ಸಾಹಸಭೀಮ ವಿಜಯ'ವನ್ನು ಸ್ವಲ್ಪ ಬದಲಾವಣೆಯೊಂದಿಗೆ 'ಗದಾಯುದ್ಧ'ವಾಗಿ ಪರಿವರ್ತಿಸಿದ್ದಾರೆ. ರಾಘವಾಂಕನ ಹರಿಶ್ಚಂದ್ರಕಾವ್ಯವು ಮತ್ತೊಂದು ನಾಟಕೀಯ ಅಂಶವನ್ನು ಒಳಗೊಂಡ ಕಾವ್ಯ. ರನ್ನ, ರಾಘವಾಂಕರಲ್ಲ, ಇನ್ನೂ ಅನೇಕ ಕವಿಗಳು ತಮ್ಮ ಕಾವ್ಯದಲ್ಲಿ ನಾಟಕೀಯ ಅಂಶವನ್ನು ತಂದಿದ್ದಾರೆ.

ಕನ್ನಡ ನಾಟಕಕ್ಕೆ ತನ್ನದೇ ಆದ ಇತಿಹಾಸವಿದೆ. ಅನೇಕ ಶಾಸನದಲ್ಲಿ ನಾಟಕದ ಬಗ್ಗೆ ಪ್ರಸ್ತಾಪ ಕಂಡುಬಂದಿದೆ. 'ಪಟ್ಟದಕಲ್ಲಿನಶಾಸನದಲ್ಲಿ ಒಬ್ಬ ನಟನ ವರ್ಣನೆಯಿದೆ. ತ್ರೈವಿಧ್ಯಗೋವರ್ಧನರೆಂಬ ಜೈನಗುರುಗಳು ನಾಟಕ ಸಾಹಿತ್ಯದಲ್ಲಿ ಪರಿಣತಿಯನ್ನು ಪಡೆದಿದ್ದು ವ್ಯಕ್ತವಾಗುತ್ತದೆ. ಇದರಲ್ಲಿ ನಾಟಕ ಸಾಹಿತ್ಯ ಮತ್ತು ನಾಟಕ ಶಾಲೆಯ ವಿವರಣೆ ಇದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನಾಟಕಗಳಿಲ್ಲದಿದ್ದರೂ, ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಸಂಸ್ಕೃತದಲ್ಲಿ ಅನೇಕ ನಾಟಕಗಳು ರಚನೆಗೊಂಡವು. ಕಾಳಿದಾಸ ಭವಭೂತಿ ಮುಂತಾದವರು ರಚಿಸಿದ ನಾಟಕಗಳನ್ನು ಕನ್ನಡ ಕವಿಗಳು ಅನುವಾದವೋ ಎನ್ನುವಂತೆ ತಮ್ಮ ಶೈಲಿಯಲ್ಲಿ ಬದಲಾಯಿಸಿಕೊಂಡರು.

ಭಾಸನ 'ಊರುಭಂಗ' 'ಸ್ವಪ್ನವಾಸವದತ್ತ' ನಾಟಕಗಳು ಕಾಳಿದಾಸನ 'ವಿಕ್ರಮೋರ್ವಶೀಯ', 'ಶಾಕುಂತಲ' ನಾಟಕಗಳು, ಹರ್ಷನ 'ರತ್ನಾವಳಿ', 'ನಾಗಾನಂದ' ನಾಟಕಗಳು. ಭವಭೂತಿಯ 'ಮಾಲತೀಮಾಧವ' ಭಟ್ಟನಾರಾಯಣನ 'ವೇಣೀಸಂಹಾರ' ಮುಂತಾದವು ಕನ್ನಡ ಕವಿಗಳ ಆಲೋಚನೆಗೆ ಒಳಪಟ್ಟಿರುವಂತಹವು.

ಪಂಪನ 'ಆದಿಪುರಾಣ'ದಲ್ಲಿ ರನ್ನನ 'ಸಾಹಸಭೀಮವಿಜಯ'ದಲ್ಲಿ ಅತ್ಯುತ್ತಮವಾದ ನಾಟಕೀಯ ಅಂಶಗಳಿವೆ. ಗೋವಿಂದ ವೈದ್ಯನ ಕಂಠೀರವ ವಿಜಯದಲ್ಲಿ ರಾಜನ ನಾಟ್ಯಶಾಲೆಯ ವರ್ಣನೆಯಿದೆ. ಕೃಷ್ಣದೇವರಾಯನ 'ಜಾಂಬವತಿ ಕಲ್ಯಾಣ'ವನ್ನು ವಸಂತೋತ್ಸವ ಸಂದರ್ಭದಲ್ಲಿ ಆಡುತ್ತಿದ್ದಂತೆ ತಿಳಿದು ಬಂದಿದೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ನಾಟಕಗಳ ದಟ್ಟ ಪ್ರಭಾವವಿರುವುದು ಕಂಡುಬರುತ್ತದೆ.

ಕನ್ನಡದ ಪ್ರಥಮ ನಾಟಕ ಸಿಂಗರಾರ್ಯನ 'ಮಿತ್ರವಿಂದಾಗೋವಿಂದ' ಇದನ್ನು ಕನ್ನಡದ ಪ್ರಥಮ ಉಪಲಬ್ಧನಾಟಕವೆಂದು ಹೇಳಲಾಗಿದೆ. ಆದರೆ ಇದು ಸಿಂಗರಾರ್ಯನ ಸ್ವತಂತ್ರ ನಾಟಕವಲ್ಲ, ಸಂಸ್ಕೃತ ಕವಿ ಶ್ರೀ ಹರ್ಷನ ರತ್ನಾವಳಿಯ ಅನುವಾದವಷ್ಟೆ.

ಕನ್ನಡ ಅನುವಾದ ಕ್ಷೇತ್ರದಲ್ಲಿ ಬಸಪ್ಪ ಶಾಸ್ತ್ರಿಗಳು ಅಪಾರ ಕೆಲಸ ಮಾಡಿದ್ದಾರೆ. ಅಭಿಜ್ಞಾನ ಶಾಕುಂತಲ, ವಿಕ್ರಮೋರ್ವಶಿಯ, ರತ್ನಾವಳಿ, ಉತ್ತರರಾಮಚರಿತ್ರೆ, ಮಾಲತಿ ಮಾಧವ, ಚಂಡಕೌಶಿಕ ಮುಂತಾದವು. ಆ ಸಾಲಿನಲ್ಲಿರುವಂತಹವು. ನಂತರ ಬಂದ ಚುರುಮುರಿ ಶೇಷಗಿರಿರಾಯರು ಶಾಕುಂತಲವನ್ನು ಕನ್ನಡಕ್ಕೆ ಅನುವಾದ ಮಾಡಿದರು.

ನರಸಿಂಹ ಮುಳುಬಾಗಿಲುರವರು ಭಟ್ಟನಾರಾಯಣನ 'ವೇಣಿಸಂಹಾರ' ಕಾಳಿದಾಸನ 'ಮಾಳವಿಕಾಗ್ನಿಮಿತ್ರ' ಶೂದ್ರಕನ 'ಮೃಚ್ಛಕಟಿಕ' ಮುಂತಾದವುಗಳನ್ನು ಕನ್ನಡಕ್ಕೆ ತಂದಿದ್ದಾರೆ. ನಂಜನಗೂಡು ಸುಬ್ಬಶಾಸ್ತ್ರಿಗಳು ಪರಿಷ್ಕೃತದ ಮೃಚ್ಛಕಟಿಕವನ್ನು 'ಕರ್ನಾಟಕ ಮೃಚ್ಛಕಟಿಕ'ವೆಂದು ಕನ್ನಡೀಕರಿಸಿದ್ದಾರೆ.

ಸಂಸ್ಕೃತದಿಂದ ಭಾಷಾಂತರಗೊಂಡು ಕನ್ನಡಕ್ಕೆ ಬಂದ ನಾಟಕಗಳಂತೆಯೇ ಇಂಗ್ಲಿಷ್ ಸಾಹಿತ್ಯದಿಂದ ತರಲಾಗಿದೆ. ಅಲ್ಲಿನ ಹಲವು ಸಾಹಿತಿಗಳ ನಾಟಕವನ್ನು ತಮ್ಮ ಅಭಿರುಚಿ, ಶೈಲಿಗೆ ತಕ್ಕಂತೆ ಅನುವಾದಿಸಲಾಗಿದೆ. ಷೇಕ್ಸ್‌ಪಿಯರ್‌ನ 'ಓಥೆಲೊ'ವನ್ನು ಬಸಪ್ಪಶಾಸ್ತ್ರಿಗಳು 'ಶೂರಸೇನ ಚರಿತ್ರೆ' ಎಂದು ಕನ್ನಡಕ್ಕೆ ತಂದರು. ಇದೇ ಮೊದಲ ಅನುವಾದ ಪ್ರಯೋಗ. ಗುಂಡೋ ಕೃಷ್ಣಚರುಮುರಿಯವರು 'ಒಥೆಲೋ' ಅನ್ನು ೧೮೮೫ರಲ್ಲಿ 'ರಾಘವೇಂದ್ರರಾವ್' ಎಂದು ರಚಿಸಿದರು. ಷೇಕ್ಸ್‌ಪಿಯರ್‌ನ 'ರೋಮಿಯೋಜೂಲಿಯೆಟ್'ನ್ನು ಎ.ಆನಂದರಾಯರು 'ರಾಮವರ್ಮಲೀಲಾವತಿ' ಯನ್ನಾಗಿ ಇದೇ ನಾಟಕ 'ರಮೇಶಲಲಿತಾ' ಎಂದು ವಾಸುದೇವಾಚಾರ್ಯರಿಂದ ಅನುವಾದಗೊಂಡಿತು.

'ದ ಮರ್ಚೆಂಟ್ ಆಫ್ ವೆನಿಸ್' ಕೆರೂರರಿಂದ "ಸುರತನಗರ ಶ್ರೇಷ್ಠಿ" ಎಂತಲು ಎಂ.ಎಸ್. ಪುಟ್ಟಣ್ಣನವರು 'ಕಿಂಗ್‌ಲಿಯರ್'ನ್ನು 'ಹೇಮಚಂದ್ರರಾಜವಿಲಾಸ' ಎಂಬ ಹೆಸರಿನಲ್ಲಿ ೧೮೬೭ರಲ್ಲಿ ಕನ್ನಡಕ್ಕೆ ತಂದರು. ಆದರೆ ಮೂಲವನ್ನು ಸಮರ್ಥ ರೀತಿಯಲ್ಲಿ ಅನುವಾದ ಮಾಡಲು ಹೆಚ್ಚು ಲೇಖಕರು ಯಶಸ್ವಿಯಾಗಲಿಲ್ಲ.

**ಅರುಣೋದಯ ಕಾಲ:**

ಹೊಸಗನ್ನಡ ಅರುಣೋದಯ ಕಾಲದಲ್ಲಿ ಕೆಲವು ಸ್ವತಂತ್ರ ನಾಟಕಗಳು ಬಂದವು. ೧೮೮೭ರಲ್ಲಿ ಸೂರಿವೆಂಕಟರಮಣಶಾಸ್ತ್ರೀಯವರ "ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ"ವೇ ಕನ್ನಡದ ಮೊದಲ ಸಾಮಾಜಿಕ ನಾಟಕವಾಗಿದೆ.

ಹುಯಿಲಗೋಳ ನಾರಾಯಣರಾಯರು 'ಸ್ತ್ರೀಧರ್ಮ ರಹಸ್ಯ' 'ಶಿಕ್ಷಣ ಸಂಭ್ರಮ' ಮತ್ತು 'ಪತಿತೋದ್ಧಾರ' ಎಂಬ ಮೂರು ಸಾಮಾಜಿಕ ನಾಟಕಗಳನ್ನು ರಚಿಸಿದರು.

ಆಧುನಿಕ ಕನ್ನಡ ನಾಟಕದಲ್ಲಿ ನವೋದಯದ ಯುಗಪ್ರವರ್ತಕರ ಹಾಗೂ ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು ನಾಟಕಗಳ ರಚನೆಯಲ್ಲಿ ಹೊಸತನವನ್ನು ತಂದವರು. ಶ್ರೀ ೧೦ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ. 'ಗದಾಯುದ್ಧ ನಾಟಕಂ', 'ಪಾರಸಿಕರು', ' ಅಶ್ವತ್ಥಾಮನ್' ಮುಂತಾದವು ಅವರಿಂದ ರಚಿಸಲ್ಪಟ್ಟವು.

ಕನ್ನಡ ಐತಿಹಾಸಿಕ ನಾಟಕಕಾರ ಸಂಸರವರು ಸುಮಾರು ೪೨ಕ್ಕೂ ಹೆಚ್ಚು ನಾಟಕ ಬರೆದಿದ್ದಾರೆ. ಅದರಲ್ಲಿ ಸುಮಾರು ೨೩ ಐತಿಹಾಸಿಕ ನಾಟಕಗಳಿವೆ. ಅದರಲ್ಲಿ ದೊರೆತವುಗಳ ಸಂಖ್ಯೆ ಕಡಿಮೆ. ಬೆಟ್ಟದರಸು, ಸುಗುಣಗಂಭೀರ, ವಿಗಡವಿಕ್ರಮರಾಯ, ವಿಜಯ ನರಸಿಂಹ, ಮಂತ್ರಶಕ್ತಿ, ಬಿರುದೆಂತೆಂಬರಗಂಡ ಮುಂತಾದವುಗಳನ್ನು ಬರೆದರು.

ಟಿ.ಪಿ.ಕೈಲಾಸಂರವರು ಸುಮಾರು ೩೦ಕ್ಕಿಂತ ಹೆಚ್ಚು ನಾಟಕ ಬರೆದರು. ಅವುಗಳಲ್ಲಿ ಬಹಿಷ್ಕಾರ, ಟೊಳ್ಳುಗಟ್ಟಿ, ಅಮ್ಮಾವ್ರಗಂಡ, ವೈಶ್ಯನ ವ್ಯಾಧಿ ಮುಂತಾದವು. ಶ್ರೀರಂಗರು ಧಾರವಾಡದ ಮಧ್ಯಮ ವರ್ಗದ ಸಮಾಜದಿಂದ ತಮ್ಮ ನಾಟಕಕ್ಕೆ ವಸ್ತುವನ್ನು ಆಯ್ದುಕೊಂಡು ೧೧ ದೊಡ್ಡ ನಾಟಕಗಳನ್ನು ೧೮ ಏಕಾಂತ ನಾಟಕಗಳನ್ನು ಬರೆದರು. ಉದರ ವೈರಾಗ್ಯ, ಮುಕ್ಕಣ್ಣ, ವಿರಾಟಪುರುಷ, ಅಧಿಕಮಾಸ, ವೈದ್ಯರಾಜ, ಹರಿಜನ್ವಾರ, ಅಸ್ಪೃಷ್ಯತೆ, ದರಿದ್ರನಾರಾಯಣ, ಸಂಸಾರಿಗ ಗಂಡ, ಪ್ರಚಂಡ ಪಾಣಿಪತ್ತು, ಕೇಳುಜನಮೇಜಯ ಮುಂತಾದವುಗಳು ಮುಖ್ಯವಾದವು.

ರಂಗಪರಿಣತರಾದ ಶಿವರಾಮ ಕಾರಂತರು ಬಿತ್ತಿದ ಬೆಳೆ, ಕರ್ಣಾರ್ಜುನ, ಗರ್ಭಗುಡಿ, ಹಣೆಬರಹಗಳನ್ನು ರಚಿಸಿದರು. ಕನ್ನಡದ ಸುಪ್ರಸಿದ್ಧ ಕವಿ ದ.ರಾ.ಬೇಂದ್ರೆಯವರು ಉದ್ಧಾರ, ನಗೆಯ ಹೊಗೆ, ಎಂಬ ದುರಂತನಾಟಕಗಳನ್ನು; ದೆವ್ವದಮನೆ, ಹಳೆಯ ಗೆಣೆಯರು, ಸಾಯೋ ಆಟ, ತಿರುಕನ ಪಿಡುಗು, ಮತ್ತು ಗೋಲ್ ಎಂಬ ಹಾಸ್ಯರಸ ಪ್ರಧಾನದ ೫ ನಾಟಕಗಳನ್ನು ಬರೆದರು. ಮಾಸ್ತಿಯವರು ಕಾಕನಕೋಟೆ, ತಾಳಿಕೋಟೆ, ಉಷಾತಿರುಪಾಣಿಗಳನ್ನು ಹಾಗೆಯೇ ಡಿ.ವಿ.ಜಿ.ಯವರು 'ಶ್ರೀವಿದ್ಯಾರಣ್ಯವಿಜಯ' ಎಂಬ ನಾಟಕ ರಚಿಸಿದರು.

ಟಿ.ಪಿ.ಕೈಲಾಸಂರವರ ನಂತರ ಸಾಮಾಜಿಕ ನಾಟಕಗಳನ್ನು ಸೃಷ್ಟಿಸಿದವರಲ್ಲಿ ಪರ್ವತವಾಣಿ ಯವರು ಪ್ರಮುಖರು. ಇವರು ಉಂಡಾಡಿಗುಂಡ, ಬಣ್ಣದ್ಗೊಂಬೆ, ವಿಪರ್ಯಾಸ, ಮೀನಾಮದುವೆ, ಬಹದ್ದೂರ್‌ಗಂಡ, ನಾಟಕ ಬರೆದರು. ಪು.ತಿ.ನ.ರವರು ಪುರಾಣ ಮತ್ತು ಪ್ರಕೃತಿ ವಸ್ತುವನ್ನಿಟ್ಟುಕೊಂಡು ಆಕಾರಾಗಮನ, ವೇಣುವಿಸರ್ಜನ, ಗೋಕುಲನಿರ್ಗಮ, ಕವಿ, ದೋಣಿಯ ಬಿನದ, ಅಹಲ್ಯೆ, ಗಣೇಶದರ್ಶನ, ವಸಂತಚಂದನ, ಶಬರಿ, ಶರದ್ವಿಲಾಸ, ರಚಿಸಿದರು.

ನವ್ಯ ನಾಟಕ ಸಾಹಿತ್ಯದಲ್ಲಿ ಹಲವು ಪ್ರಭಾವಿ ನಾಟಕಕಾರರನ್ನು ಕಾಣಬಹುದು. ಅವರಲ್ಲಿ ಗಿರೀಶ್ ಕಾರ್ನಾಡರು ಪ್ರಮುಖರು. ಇವರು ಪುರಾಣ ಮತ್ತು ಸಮಕಾಲೀನ ವಸ್ತುಗಳಿಂದ ಉತ್ತಮ ನಾಟಕ ಬರೆದರು. ಯಯಾತಿ, ತಲೆದಂಡ, ತುಘಲಕ್, ಹಿಟ್ಟಿನಹುಂಜ, ನಾಗಮಂಡಲ, ಅಗ್ನಿ ಮತ್ತು ಮಳೆ, ಮುಂತಾದವುಗಳು ಅವುಗಳಲ್ಲಿ ಮುಖ್ಯವಾದವುಗಳು.

ಚಂದ್ರಶೇಖರ ಕಂಬಾರರು ಮತ್ತೋರ್ವ ಶ್ರೇಷ್ಠ ನಾಟಕಕಾರರು. ಜೋಕುಮಾರಸ್ವಾಮಿ, ರುಷ್ಯಶೃಂಗ, ಜೈಸಿದನಾಯ್ಕ, ಸಂಗ್ಯಾಬಾಳ್ಯ, ಸಿರಿಸಂಪಿಗೆ, ಹುಲಿಯ ನೆರಳು ಮುಂತಾದವುಗಳು ಇವರಿಂದ ರಚಿತವಾದವು. ಇವುಗಳು ರಂಗದ ಮೇಲೂ ಪ್ರದರ್ಶನಕ್ಕೆ ಒಳಪಟ್ಟು ಪ್ರೇಕ್ಷಕರ ಮನಸೂರೆಗೊಂಡಿವೆ. ಇವರಲ್ಲದೆ ಇನ್ನೂ ಅನೇಕ ನಾಟಕಕಾರರು ಕನ್ನಡ ನಾಟಕರಂಗಕ್ಕೆ ತಮ್ಮದೇ ಆದ ಕಾಣ್ಕೆ ನೀಡಿದ್ದಾರೆ.

## ಅಡಿಟಿಪ್ಪಣಿಗಳು

೧. ತ.ಸು.ಶಾಮರಾಯರು– ಕನ್ನಡ ನಾಟಕ– ಪು. ೫೦

೨. ಡಾ. ಮಳಲಿ ವಸಂತಕುಮಾರ್– ಕುವೆಂಪು ಅವರ ನಾಟಕಗಳು ಒಂದು ಅಧ್ಯಯನ, ಪು. ೧೦

೩. ಅದೇ, ಪು. ೧೧೨

೪. ಕುವೆಂಪು – ಶೂದ್ರತಪಸ್ವಿ ಮತ್ತು ಬಲಿದಾನ, ಪು. ೭.

# ಅಧ್ಯಾಯ – ಮೂರು

## ಕನ್ನಡ ಐತಿಹಾಸಿಕ ನಾಟಕಗಳು

ಐತಿಹಾಸಿಕ ನಾಟಕವೊಂದನ್ನು ಬರೆಯ ಹೊರಟ ನಾಟಕಕಾರರಿಗೆ ಅರಿವಿಗೆ ಬರದೆ ಕಾಣಸಿಗುವ ವಿಷಯವೆಂದರೆ ಆತನ ಸಮಕಾಲೀನ ಸಮಸ್ಯೆಗಳು. ಇತಿಹಾಸದ ವಸ್ತುವನ್ನು ವಿಷಯವಾಗಿ ತೆಗೆದುಕೊಂಡು ನಾಟಕ ರಚಿಸುವಾಗ ಅಂದಿನ ಸಾಮಾಜಿಕ ಅಥವಾ ರಾಜಕೀಯ ಪರಿಸ್ಥಿತಿಯ ವಿಮರ್ಶೆಗೆ ತೊಡಗುವುದು ಸರಿಯೆನ್ನಿಸದೇ ಹೋಗಬಹುದು. ನಾಟಕದ ವಿಷಯ ಮತ್ತು ಚೌಕಟ್ಟಿಗೆ ದಕ್ಕೆಯಾಗದಂತಹ ಸಂದರ್ಭಗಳನ್ನು ನಾಟಕದಲ್ಲಿ ತರಬೇಕಾಗುತ್ತದೆ. "ಚರಿತ್ರೆಯೆಂಬುದು ಒಂದು ಮುದ್ದೆ ಮುದ್ದೆಯಾದ ಒರಟು ವಿಗ್ರಹವಾದರೆ ಅದರ ಅಂಕುಡೊಂಕುಗಳನ್ನು ಸವರಿ, ಕೈಕಾಲುಗಳನ್ನು ಬಿಡಿಸಿ, ಕೆತ್ತನೆಯ ಕುಸುರಿ ಕೆಲಸದಿಂದ ದಿವ್ಯಾಭರಣ ಭೂಷಿತೆಯಾಗಿರುವ ಒಂದು ಕಲಾಕೃತಿ ಯಂತಿರುವುದು ಐತಿಹಾಸಿಕ ನಾಟಕ. ಅದನ್ನು ಕೆತ್ತಲು ಕುಳಿತಿರುವವನು ಮೂಲದ ಗಣಪತಿಯನ್ನು ತಿದ್ದಹೊರಟು ಗಣಪತಿಯ ಅಪ್ಪನಾಗದಂತೆ ಎಚ್ಚರಿಕೆಯನ್ನು ವಹಿಸಬೇಕು."[1] ತ.ಸು.ಶಾಮರಾಯರ ಮೇಲಿನ ಮಾತುಗಳು ಒಪ್ಪುವಂತದ್ದೆ. ಇತಿಹಾಸದ ವಸ್ತುವಿನಿಂದ ಐತಿಹಾಸಿಕ ನಾಟಕ ರಚನೆ ಹೇಗಿರಬೇಕು ಎಂಬುದು ಅವರ ನಿಲುವಾಗಿದೆ.

ಐತಿಹಾಸಿಕ ನಾಟಕ ರಚನೆಗೆ ಮುಂದಾಗುವ ನಾಟಕಕಾರರು ಮೊದಲು ತಮ್ಮ ಕಥಾವಸ್ತುವಿಗೆ ಆಧಾರವಾಗಿರುವ ಸಾಹಿತ್ಯದ ಸಾಮಗ್ರಿಗಳನ್ನೆಲ್ಲ ಗ್ರಹಿಸಿ ತಮ್ಮ ಕೃತಿಗೆ ಅಗತ್ಯವಾಗಿ ಪೂರಕವಾಗುವ ಎಲ್ಲಾ ಅಂಶಗಳನ್ನು ಒಂದು ಕಡೆ ಕಲೆಹಾಕಿ ಇಟ್ಟುಕೊಳ್ಳಬೇಕಾಗುತ್ತದೆ. ಇದು ನಾಟಕದ ಕ್ರಮಬದ್ಧ ರಚನೆಗೆ ಪೋಷಕವಾಗುವುದು ಹಾಗು ಇದೇ ಮುಖ್ಯ ಅಂಗವೂ ಹೌದು. ಈ ಕೆಲಸಕ್ಕೆ ಹಿಂದಿನ ಕಾಲದ ಕಾವ್ಯಗಳು, ಕೈಬರಹದ ಕಡತಗಳು, ಶಾಸನಗಳು ಮುಂತಾದವುಗಳ ಸಂಗ್ರಹ ಮತ್ತು ಆಳವಾದ ಅಭ್ಯಾಸ ಬೇಕಾಗುತ್ತದೆ. ಹಿಂದಿನ ಭಾಷಾಶೈಲಿ ಇಂದು ತೋರಿಕೆಯಾಗಿ ನಾಟಕದಲ್ಲಿ ತರುವುದರಿಂದ ಒಂದು ಸನ್ನಿವೇಶವನ್ನು ಕಲಿಸಿದಂತಾಗಬಹುದು. ಇಂತಹ ನಾಟಕಗಳು ಜನರ ಮನ್ನಣೆ ಪಡೆದುಕೊಳ್ಳಬಹುದಾದರು ಈ ಕ್ರಮ ಕಷ್ಟವಾಗಬಹುದು. ಆದರೂ ಚರಿತ್ರೆಯ ನೈಜತೆಯನ್ನು ಕೃತಿಯಲ್ಲಿ ತರಬೇಕಾದರೆ ಮೇಲಿನ ಕ್ರಮದ ಅಗತ್ಯತೆ ಇದೆ.

ಇದುವರೆಗಿನ ಕನ್ನಡ ನಾಟಕಗಳನ್ನು ಗಮನಿಸಿದಾಗ ಕಂಡುಬರುವ ಅಂಶವೆಂದರೆ ಐತಿಹಾಸಿಕ ನಾಟಕಗಳ ರಚನೆಯ ಕಾರ್ಯ ಅಷ್ಟಾಗಿ ಆಗಿಲ್ಲ. ಕನ್ನಡ ನಾಡು ಮತ್ತು ಇತಿಹಾಸಕ್ಕೆ ವಿಶಿಷ್ಟವಾದ ಸ್ಥಾನವಿದೆ. ಐತಿಹಾಸಿಕ ನಾಟಕಗಳ ರಚನೆಗೆ ಬೇಕಾದಷ್ಟು ಸಾಮಗ್ರಿಯೂ ಇದೆ. ಆದರೆ ಅದನ್ನು ಸರಿಯಾದ ರೀತಿ

ಬಳಸಿಕೊಳ್ಳಲಾಗುತ್ತಿಲ್ಲ. "ಶ್ರೀಮಾನ್ ಎ.ಆರ್.ಕೃಷ್ಣಶಾಸ್ತ್ರಿಗಳು ತಮ್ಮ 'ಮೈಸೂರು ಚರಿತ್ರೆಯ ಮೇಲಣ ಕಾದಂಬರಿಗೆ ಸಾಮಗ್ರಿಗಳು' ಎಂಬ ಲೇಖನದಲ್ಲಿ ನಾಲ್ಕಾರು ಕಥಾ ವಸ್ತುಗಳನ್ನು ಒದಗಿಸಿ, ನಾಟಕಗಳನ್ನೋ ಕಾದಂಬರಿಗಳನ್ನೋ ಬರೆಯಹೊರಡುವವರಿಗೆ ಒಂದು ಕೈ ಕಂಬವನ್ನು ನೆಟ್ಟಿದ್ದಾರೆ. ಆದರೆ ಅದನ್ನು ನಮ್ಮ ಜನ ಸಂಪೂರ್ಣವಾಗಿ ಬಳಸಿಕೊಂಡಿಲ್ಲ. ಸೃಷ್ಟಿ ಮಾಡುವ ಪ್ರೇರಣೆಯೊಂದು ಬರುವುದಾದರೆ ಇಲ್ಲಿನ ಕಥಾವಸ್ತುಗಳೇ ಆಗಬೇಕೆಂಬುದೇನೂ ಇಲ್ಲ. ಆದರೆ ಏಕೋ ಕನ್ನಡದ ಮಹಾಕವಿಗಳಿಗೆ ಈ ಕಡೆ ದೃಷ್ಟಿ ತಿರುಗಿಲ್ಲ. ನಿರ್ಜೀವವಾದ ಅಸ್ಥಿಪಂಜರ ದಂತಿರುವ ತುಂಡು ತುಂಡು ಐತಿಹಾಸಿಕ ವೃತ್ತಾಂತಗಳು ಪುಷ್ಟವಾದ ದೇಹವನ್ನು ಪಡೆದು ಜೀವಕಳೆಯಿಂದ ತುಂಬಿ ದೇದೀಪ್ಯಮಾನವಾಗಿ ಬೆಳಗುವ ಕಾಲ ಕನ್ನಡ ನಾಡಿಗೆ ಇನ್ನು ಒದಗಿ ಬಂದಿಲ್ಲವೋ ಏನೋ!"[೨] ಎಂಬ ಮಾತುಗಳು ಸಮಂಜಸವಾಗಿವೆ.

ಪುರಾಣಕ್ಕಿಂತ ಕಲ್ಪಿತ ಕೃತಿಗಳಿಗಿಂತ ಇತಿಹಾಸ ಸತ್ಯಕ್ಕೆ ಹೆಚ್ಚು ಸಮೀಪವಾದುದು. ಇತಿಹಾಸದಲ್ಲಿನ ವೈಭವಿಕ ಸಂಗತಿಗಳ ನಡುವೆಯು ಸತ್ಯದ ಅಂಶಗಳು ಕಾಣಸಿಗುತ್ತವೆ. ಹಿಂದೆ ನಡೆದ ಘಟನೆಗಳು ಅವರ ಸಂಸ್ಕೃತಿ, ಜನಜೀವನ, ಬದುಕಿನ ಮೇಲೆ ಬೆಳಕು ಚೆಲ್ಲುವಂತದ್ದು. ಅಲ್ಲದೆ ಪ್ರಸ್ತುತ ಸಂಗತಿಗಳನ್ನು ಇತಿಹಾಸದ ವಸ್ತುವಿನೊಂದಿಗೆ ಸಮೀಕರಿಸಿ ನೋಡುವುದರಿಂದ ಸರ್ವಕಾಲೀಕತೆ ದೊರಕುವುದು. ಅಲ್ಲದೆ ನೈತಿಕ ವಿಚಾರಗಳ ಮಂಡನೆಗಂತೂ ಇತಿಹಾಸ ಹೇಳಿ ಮಾಡಿಸಿದ ಒಂದು ಅಭೂತಪೂರ್ವ ಮಾಧ್ಯಮವಾಗಿದೆ.

**ಸಂಸ:**

ಕನ್ನಡ ಐತಿಹಾಸಿಕ ನಾಟಕರಂಗದ ಮೊದಲಿಗ ಹಾಗೂ ಈ ರಂಗಕ್ಕಾಗಿ ತಮ್ಮ ಬದುಕನ್ನೆ ಮುಡಿಪಾಗಿಟ್ಟವರು ಸಂಸ ಕನ್ನಡ ಐತಿಹಾಸಿಕ ರಂಗವನ್ನು ಬೆಳೆಸಿದ ಕೀರ್ತಿ ಮೊದಲು ಇವರಿಗೆ ಸಲ್ಲಬೇಕು. (ಅವರ ಪೂರ್ಣವಾದ ಹೆಸರು ಎ.ಎನ್.ನರಸಿಂಹಯ್ಯ, ಎಂ.ಎ. ಪಿಎಚ್.ಡಿ ಅವರ ಸೋದರರು) ಸಂಸರವರು ಇಪ್ಪತ್ಮೂರು ಐತಿಹಾಸಿಕ ನಾಟಕಗಳನ್ನು ರಚಿಸಿರುವ ಬಗ್ಗೆ ತಿಳಿದುಬರುತ್ತದೆ. ಆದರೆ ಬೆಟ್ಟದರಸು, ವಿಜಯನಾರಸಿಂಹ, ಮಂತ್ರಶಕ್ತಿ ಎಂಬ ನಾಟಕ ಸೇರಿದಂತೆ ಇನ್ನು ಹಲಕೆಲವು ನಾಟಕಗಳು ಬೆಳೆದುಬಂದಿವೆ. ೨೩ ನಾಟಕಗಳೂ ನಮಗೆ ದೊರಕಿಲ್ಲ. ಅಲ್ಲದೆ ತಾವು ೨೩ ನಾಟಕಗಳನ್ನು ಬರೆದಿಟ್ಟಿರುವುದಾಗಿ ಅವರೇ ಸ್ವತಃ ಹೇಳಿಕೊಂಡಿದ್ದಾರೆ. ಅಲ್ಲದೆ ಸಂಸರ ಅಸಮಾನ್ಯ ನಾಟಕ ರಚನಾ ಕೌಶಲದ ಮುಂದೆ ಅದನ್ನು ತಳ್ಳಿಹಾಕುವಂತಿಲ್ಲ. ಈಗ ಉಳಿದ ನಾಟಕಗಳೇ ಅದಕ್ಕೆ ಸಾಕ್ಷಿಯಾಗಿ ನಿಲ್ಲಬಹುದಾಗಿದೆ.

ಸಂಸರವರು ರಚಿಸಿದ ಎಲ್ಲ ನಾಟಕಗಳೂ ಸಹ ಮೈಸೂರು ಹಾಗೂ ಸುತ್ತಮುತ್ತಲ ಇತಿಹಾಸವನ್ನು ಕುರಿತಾದದ್ದು. ಸಂಸರ ಅಪ್ರಕಟಿತ ನಾಟಕಗಳ

ವಿಚಾರವಾಗಿ ಅಷ್ಟೇನು ಗೊತ್ತಿಲ್ಲ. ಆದ್ದರಿಂದ ಶ್ರೀ ಜಿ.ಪಿ.ರಾಜರತ್ನಂರವರು ಬರೆದಿರುವ ಒಂದು ಲೇಖನದ ಆಧಾರದಿಂದ ಅವುಗಳ ವಿಚಾರವಾಗಿ ಎರಡು ಮಾತುಗಳನ್ನು ಹೇಳಬೇಕಾಗಿದೆ. 'ಬೆಟ್ಟದ ಅರಸು' ನಾಟಕದ ಮುಖ್ಯ ಪಾತ್ರ 'ಬೆಟ್ಟದರಸು' ಈತ ರಾಜ ಒಡೆಯರ ಸೊದರ ಬೆಟ್ಟದ ಚಾಮರಾಜರ ಬಂಗಾರದವಳ ಮಗ. ರಾಜ ಒಡೆಯರು ಈತನಿಗೆ ದಳವಾಯಿ ಪದವಿಯನ್ನು ಕೊಟ್ಟು ಅಸುನೀಗಿದರು. ಕ್ರಮೇಣ ದಳವಾಯಿತನ ಮುಂದುವರಿಸಿದ ಈತ ಉತ್ತಮ ಕಾರ್ಯ ನೈಪುಣ್ಯವನ್ನು ಹೊಂದಿದವನಾದನು. ಆದರೆ ವಿಲಾಸಿ ರಾಜನಾದ ಚಾಮರಾಜ ಒಡೆಯರು ಚಾಡಿಮಾತುಗಳನ್ನು ಕೇಳಿಕೊಂಡು ಅವನ ಕಣ್ಣಿಗೆ ಭಾಂಡ ಕರ್ಪೂರವನ್ನು ಕಟ್ಟಿಸಿ ಕೊಲೆಮಾಡಿಸಿದರು. ನಂತರ ಇನ್ನೂ ಹಲವು ಮಂದಿ ದಳವಾಯಿಗಳು ಅಧಿಕಾರಕ್ಕೆ ಬಂದರು. ಆದರೂ ರಾಜಭಕ್ತರು ಕಪಟಿಗಳಿಗೆ ಬಲಿಯಾಗಬೇಕಾಯಿತು. ಆದರೆ ಮುಂದೆ ಸಮರ್ಥ ದಳವಾಯಿ ವಿಗಡ ವಿಕ್ರಮರಾಯ ಅಧಿಕಾರಕ್ಕೆ ಬಂದು ಅಸಮರ್ಥರು ಮತ್ತು ಕಪಟಿಗಳನ್ನು ಮೂಲೆಗುಂಪು ಮಾಡುತ್ತಾನೆ.

ಸಂಸರ 'ವಿಜಯ ನಾರಸಿಂಹ' ರಣಧೀರ ಕಂಠೀರವ ನರಸರಾಜರು ತಮ್ಮ ಅಭ್ಯುದಯಕ್ಕಾಗಿ ಅಡ್ಡಗಾಲಾಗಿದ್ದ ದುಷ್ಟ ಶಕ್ತಿಗಳನ್ನು ಸದೆ ಬಡಿಯುವ ಕಥೆ ಮನೋಜ್ಞವಾಗಿ ಮೂಡಿಬಂದಿದೆ. ತಿರುಚನಾಪಳ್ಳಿಯ ಜಟ್ಟಿಯನ್ನು ಕಂಠೀರವನು ಸಂಹರಿಸಿದುದರಿಂದ ಉದ್ರಿಕ್ತನಾದ ಶೆಂದಲೈಮಲ್ಲನು ಅಣ್ಣನ ಮೇಲಿನ ಸೇಡು ತೀರಿಸಿಕೊಳ್ಳಲು ಹವಣಿಸುತ್ತಾನೆ. ಅಲ್ಲದೆ ತಿರುಚನಾಪಳ್ಳಿ ಪಾಳೇಗಾರ ಕಂಠೀರವರನ್ನು ಕೊಲೆಮಾಡಲು ೨೫ ಜನ ಕೊಲೆಪಾತಕರನ್ನು ನೇಮಿಸುತ್ತಾನೆ. ಬಿಜಾಪುರದ ಹಮೀದ್‌ಖಾನನೂ, ಚಂದ್ರಗಿರಿಯ ಜೀವನಪಂತನೂ ಇವನ ಮೇಲೆ ದಂಡೆತ್ತಿಬರುತ್ತಾರೆ. ಇವರಲ್ಲದೆ ಊರಿನ ಒಳಗಿನ ಹಲವು ದುಷ್ಟ ಶಕ್ತಿಗಳು ಸಹ ಕಂಠೀರವನ ಅಂತ್ಯಕಾಣಿಸಲು ಹವಣಿಸುತ್ತಿರುತ್ತಾರೆ. ಆದರೆ ಸಮರ್ಥ ಆಡಳಿತಗಾರ-ನಾದ ನರಸರಾಜರು ಇವರನ್ನೆಲ್ಲ ಸದೆಬಡಿದು ತಮ್ಮ ನೆಲೆಯನ್ನು ಸುಭದ್ರ-ಪಡಿಸಿಕೊಳ್ಳುತ್ತಾರೆ. ಇದು 'ವಿಜಯ ನಾರಸಿಂಹ' ಕಥಾವಸ್ತುವಾಗಿದೆ.

ಸಂಸರ ಮತ್ತೊಂದು ನಾಟಕ 'ವಿಗಡವಿಕ್ರಮರಾಯ' ಇಲ್ಲಿ ವಿಕ್ರಮನ ಶೌರ್ಯ ಪ್ರತಾಪಗಳಿಗೆ ಹೆಚ್ಚು ಮನ್ನಣೆ ನೀಡಲಾಗಿದೆ. ಈತ ಮೈಸೂರು ರಾಜ್ಯದ ಆಡಳಿತವನ್ನೆಲ್ಲಾ ತಾನೇ ವಹಿಸಿಕೊಂಡು ದರ್ಪದಿಂದ ಆಳ್ವಿಕೆ ನಡೆಸುತ್ತಿರುತ್ತಾನೆ. ಈತನ ವಿಗಡತನ ಎಲ್ಲರಿಗೂ ಬೇಸರ ಉಂಟುಮಾಡಿರುತ್ತದೆ. ಆ ಸಮಯದಲ್ಲಿ ರಾಜಒಡೆಯರು ತಾವೇ ಅಧಿಕಾರವನ್ನು ವಹಿಸಿಕೊಳ್ಳಲು ಮುಂದಾಗಿ ವಿಕ್ರಮರಾಯನನ್ನು ವಿಚಾರಣೆಗಾಗಿ ಕರೆಸಲು ಮುಂದಾದಾಗ ಆತನ ಕೋಪ ನೆತ್ತಿಗೇರುತ್ತದೆ. ರಾಜನನ್ನು ವಿಷ ನೀಡಿ ಕೊಲೆಮಾಡಿಸುತ್ತಾನೆ.

ತನ್ನ ಅಧಿಕಾರಕ್ಕೆ ಅಡ್ಡಗಾಲಾಗಿದ್ದ ಕಂಠೀರವ ನರಸರಾಜರನ್ನು ಸಿಂಹಾಸನಕ್ಕೆ ಆಯ್ದಿರುವುದಾಗಿ ಹೇಳಿ, ಆತನನ್ನು ಕರೆಸಿ ಸೆರೆಮನೆಗೆ ತಳ್ಳಿಸುತ್ತಾನೆ. ಇದರಿಂದ ಕೋಪಗೊಂಡ ಕಂಠೀರವರ ಗರಡಿಯ ಗೆಳೆಯರು ವೇಷ ಮರೆಸಿಕೊಂಡು ಬಂದು ಸ್ಥಳೀಯರನ್ನೆಲ್ಲ ವಿಕ್ರಮನ ವಿರುದ್ಧ ಎತ್ತಿಕಟ್ಟುತ್ತಾರೆ. ಹೀಗಿರುವಾಗಲೇ ಅರಮನೆಯ ಮೇಲಿನ ಗೌರವದಿಂದಾಗಿ ಚನ್ನ ಮತ್ತು ರಂಗರೆಂಬ ಅರಮನೆಯ ಸೇವಕರೆ ಸ್ವತಃ ವಿಗಡ ವಿಕ್ರಮನನ್ನು ಕೊಲೆಮಾಡುತ್ತಾರೆ ನಂತರ ಕಂಠೀರವ ನರಸರಾಜರಿಗೆ ಪಟ್ಟಾಭಿಷೇಕವಾಗುತ್ತದೆ.

ಅಧಿಕಾರವರ್ಗದವರೊಂದಿಗೂ ಸೌಜನ್ಯದಿಂದ ವರ್ತಿಸಿದ ವಿಕ್ರಮನು ಕರಣಿಕರನ್ನು ಕರೆಸಿ ಅವಮಾನಗೊಳಿಸಿ ಅಧಿಕಾರವನ್ನು ಕಸಿದುಕೊಳ್ಳುತ್ತಾನೆ. "ಸತ್ತ ಏಕೈಕ ಪುತ್ರನನ್ನು ರಾಜಮಾತೆ ತೊಡೆಯ ಮೇಲೆ ಮಲಗಿಸಿಕೊಂಡಿದ್ದಾಳೆ; ವಿಕ್ರಮನು ನರರಾಕ್ಷಸನಂತೆ ಅಲ್ಲಿಗೆ ಪ್ರವೇಶಿಸಿ ಶವದ ಮೇಲಿನ ಶಿರ್ಖಾಸ, ಪಟ್ಟದುಂಗುರ, ಎರಾವಟ್ಟಿನ ಕತ್ತಿ– ಇವುಗಳನ್ನು ಸುಲಿದುಕೊಂಡು ಹೊರಟು ಹೋಗುತ್ತಾನೆ. ರಾಜಮಾತೆಯ ಹೃದಯದಲ್ಲಿದ್ದ ಜ್ವಾಲಾಮುಖಿ ಅವನಿಗೆ ಸ್ವಲ್ಪವೂ ಲಕ್ಷ್ಯವಿಲ್ಲ. ಚನ್ನ ರಂಗರ ಕೈಯಿಂದ ತನ್ನ ತಲೆ ಕೆಳಕ್ಕುರುಳುವವರೆಗೂ ಅವನಿಗೆ ಅದೇ ಬಗೆಯಾದ ಆತ್ಮವಿಶ್ವಾಸ. ರಣಧೀರನ ರಾಜಭಕ್ತಿ, ಗಿರೀಶನ ಸ್ನೇಹಶಕ್ತಿ, ರಾಜಮಾತೆಯ ಮತ್ತು ಪೌರರ ಪ್ರತೀಕಾರ ಶಕ್ತಿ ಇಷ್ಟನ್ನು ವಿಕ್ರಮನ ಸ್ನೇಹದ ಶಕ್ತಿ ಇದಿರಿಸಲಾರದೆ ಪತಂಗದ ದುರದೃಷ್ಟನನ್ನು ಪಡೆಯಿತು"[೩] ಎಂಬುದಾಗಿ ತ.ಸು.ಶಾಮರಾಯರ ಅಭಿಪ್ರಾಯ ಒಪ್ಪುವಂತದ್ದೆ.

ಒಟ್ಟಿನಲ್ಲಿ ಸಂಸರ ಸ್ವಶಕ್ತಿ ಸಾಮರ್ಥ್ಯದಿಂದಾಗಿ ಅವರ ನಾಟಕಗಳು ಪೂರ್ಣತೆಯನ್ನು ಪಡೆದುಕೊಂಡಿವೆ. ಇಲ್ಲಿನ ಐತಿಹಾಸಿಕ ಸಂಗತಿ, ಪಾತ್ರ ನಿರೂಪಣೆ ಸಂವಿಧಾನ ಕೌಶಲ ಉತ್ತಮವಾಗಿ ನಿರೂಪಿತವಾಗಿದೆ.

ಸಂಸರವರದು ಜೀವಂತ ಶೈಲಿ ಹಾಗೂ ಚಾರಿತ್ರಿಕ ಗದ್ಯದಿಂದ ವಾಸ್ತವತೆಯಿಂದ ಕೂಡಿದ್ದು. ಜಲಬತ್ತಿದ ಬಾವಿಯಲ್ಲಿ ಸಂಸರು ತಮ್ಮ ಶೈಲಿಯಿಂದಾಗಿ ನೀರು ತರಿಸಿದಂತೆ ಐತಿಹಾಸಿಕ ನಾಟಕ ಕ್ಷೇತ್ರ ಬೆಳೆದುಬಂದಿದೆ. 'ಸುಂಡಿಲ ಹಿಡಿದಾಟಕ್ಕೆ ಮಯ್ಯೆಗ್ಲಾಡರವಾಗಿದೆ.' "ನಿಮ್ಮ ರಣಧೀರ ಮಹಾರಾಜರು ನೀವು ಸೂಚಿಸಿದಂತೆ ಅಂತಹ ಶೂರ ಪರಾಕ್ರಮಿ ಸೋಲವೆಡೆಗಿಸಿದ ಸಾಹಸಿಯೇ ಆಗಿರುವುದುಂಟಾದರೆ" ಇಂತಹ ಉತ್ತಮ ಸಂಭಾಷಣೆಯಿದೆ. ಗಂಡು ಶೈಲಿಯಿಂದ ಕೂಡಿದ ಇವರ ನಾಟಕಗಳು ಯಶಸ್ವಿಯಾದ ನಾಟಕಗಳಾಗಿವೆ.

ಸಂಸರನ್ನು ಬಿಟ್ಟರೆ ಐತಿಹಾಸಿಕ ಸಂಗತಿಗಳನ್ನು ನಾಟಕದಲ್ಲಿ ಬಳಸಿಕೊಂಡವರೆಂದರೆ ಎಂ.ಆರ್.ಶ್ರೀನಿವಾಸಮೂರ್ತಿಯವರೇ 'ಕಂಠೀರವ ವಿಜಯ', 'ಧರ್ಮ ದುರಂತ' ನಾಟಕಗಳು ಇಂದಿಗೂ ಉಳಿದುಕೊಂಡು ಬಂದಿರುವ ನಾಟಕಗಳಾಗಿವೆ. ಅಲ್ಲಿನ ವಸ್ತು ನಿರೂಪಣೆ ಅದಕ್ಕೆ ಇಂಬು ನೀಡಿದೆ. 'ಕಂಠೀರವ ವಿಜಯ' ನಾಟಕವು ಜಗಜಟ್ಟಿ ನರಸರಾಜ ಒಡೆಯರ ಕಥೆಯನ್ನು ಒಳಗೊಂಡ ನಾಟಕವಾಗಿದೆ. ಇಲ್ಲಿ ನರಸರಾಜರು ತಮ್ಮ ಬಾಲ್ಯದಲ್ಲಿಯೇ ತಿರುಚನಾಪಳ್ಳಿಯ ಜಗಜಟ್ಟಿಯನ್ನು ಎದುರಿಸಿ ಗೆದ್ದುಬಂದ ಕಥೆಯನ್ನು ವಿವರಿಸಲಾಗಿದೆ.

ಕಂಠೀರವನು ಸಮರ್ಥ ಸಾಹಸಿಗ ಈತ ಬೇಟೆಯಲ್ಲೂ ನೈಪುಣ್ಯತೆ ಸಾಧಿಸಿದವನು. ತಿಮ್ಮಪ್ಪನಾಯಕ ಮತ್ತು ದಾಸರಾಜಯ್ಯ ಕಂಠೀರವನ ನೆಚ್ಚಿನ ಮಿತ್ರರು ಹಾಗೂ ಅವನಿಗಾಗಿ ತಮ್ಮ ಪ್ರಾಣವನ್ನೇ ಮುಡಿಪಾಗಿಟ್ಟವರು. ತಿರುಚನಾಪಳ್ಳಿಯ ಜಟ್ಟಿ ಮಹಾಶೂರನೆಂದು ಬ್ರಾಹ್ಮಣನು ಹೇಳಿದಾಗ 'ವೀರರಿಗೆ ಮರಣವು ಒಂದೇ ಬಾರಿ ಬರುವುದು, ಅಂಜುಬುರುಕರಿಗೆ ಹೆದರಿದಾಗಲೆಲ್ಲ ಬರುವುದು' ಎಂಬಂತಹ ಕಂಠೀರವನ ಮಾತು ಅವನ ಪೌರುಷಕ್ಕೆ ತಕ್ಕುದಾದುದೆ. ತಿರುಚನಾಪಳ್ಳಿಯ ಪಾಳೆಯಗಾರನು ಮೈಸೂರಿನವರೆಂದರೆ ಬುದ್ಧಿ ಬಲಗಳೆರಡೂ ಇಲ್ಲದ ಎರಡು ಮೈನಾಡ ಜನ ಎಂದು ಕೊಂಡಿದ್ದ. ಅವನ ಸೊಕ್ಕನ್ನು ಮುರಿದು ಕೊಂದವ ರಣಧೀರ ಕಂಠೀರವನೆ. ಆದರೂ ಈ ನಾಟಕದಲ್ಲಿ ಕಥೆ ಆಕರ್ಷಕ ಶೈಲಿಯಿಂದ ಕೂಡಿದಂತೆ ಕಾಣುವುದಿಲ್ಲ. ಕಥೆ ನಿರೂಪಣೆ ರೀತಿಯಲ್ಲಿ ಲೋಪವಿದ್ದಂತೆ ತೋರುತ್ತದೆ. ಸಂಭಾಷಣೆಯ ರೂಪದಲ್ಲಿ ಕಥೆ ಇದೆ. ವೇದಿಕೆಯಲ್ಲಿ ಅಭಿನಯಕ್ಕೆ ಯೋಗ್ಯವಾದ ಕಥೆ ಇದಾಗಿದೆ.

'ಧರ್ಮದುರಂತ' ಎಂ.ಆರ್.ಶ್ರೀನಿವಾಸಮೂರ್ತಿ ಅವರ ಮತ್ತೊಂದು ನಾಟಕ. ಇದು ಟಿಪ್ಪುಸುಲ್ತಾನನ ಆಳ್ವಿಕೆಗೆ ಸೇರಿದುದು. ನವಾಬನು ಹದನೂರನ್ನು ಮುತ್ತಿ, ಆಕ್ರಮಿಸಿದಾಗ ಅಲ್ಲಿದ್ದ ರಾಮರಾಯ ಜಾತಿಗೆಟ್ಟು ಮುಸ್ಲಿಮನಾಗುವನು. ಅವನ ಹೆಸರು 'ಖಾನ್ ಜಹಾನ್‌ಖಾನ್' ಎಂದಾಗುವುದು. ನಂತರ ಈತ ಇಸ್ಲಾಂ ಧರ್ಮವನ್ನು ಆಳವಾಗಿ ಅಭ್ಯಾಸಮಾಡಿ ಅದರಲ್ಲಿ ಪಾಂಡಿತ್ಯ ಪಡೆದು ಮುಸ್ಲಿಂ ಸ್ತ್ರೀಯನ್ನು ವಿವಾಹವಾದುದಲ್ಲದೆ ಟಿಪ್ಪುವಿನ ಬಲಗೈ ಭಂಟನಾದ. ಮತಾಂತರಿ ಖಾನ್‌ನು ಬ್ರಾಹ್ಮಣ ಹಾಗೂ ಮುಸ್ಲಿಂ ಮಡದಿಯೊಂದಿಗೂ ಉಂಡುಟ್ಟು ಸುಖದಿಂದಿದ್ದನು. ಕೊನೆಗೆ ೪ನೇ ಮೈಸೂರು ಕದನ ನಡೆದ ಮೇಲೆ ಮತ್ತೆ ಬ್ರಾಹ್ಮಣ ಮತಕ್ಕೆ ಸೇರಲು ಹವಣಿಸುತ್ತಿದ್ದನು. ಆದರೆ ಮೊದಲಿನ ಗೌರವ ಅವನಿಗೆ ದೊರೆಯುವ ಸೂಚನೆ ಕಾಣಸಿಗಲಿಲ್ಲ. ಹಾಗಾಗಿ ಜುಗುಪ್ಸೆಗೊಂಡ ಆತ ಬ್ರಾಹ್ಮಣ್ಯವೇ ಬೇಡವೆಂದು ಮುಸ್ಲಿಂ ಆಗಿಯೇ ಉಳಿದುಕೊಂಡನು. ಇದು ಐತಿಹಾಸಿಕ ಕತೆ.

ಆದರೆ ಎಂ.ಆರ್. ಶ್ರೀ ಅವರು ಮೂಲಕ್ಕಿಂತ ಹಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ನಾಲ್ಕನೇ ಮೈಸೂರು ಯುದ್ಧದಲ್ಲಿ ಗಾಯಗೊಂಡ "ಖಾನ್ ಜಹಾನ್ ಖಾನ್‌ನನ್ನು ಮೌಲಾನಾ ಮತ್ತು ಅವನ ಮಗಳು 'ಆಯುಷಾ' ಶುಶ್ರೂಷೆ ಮಾಡಿ ಬದುಕಿಸುತ್ತಾಳೆ. ಇವನು ಗುಣಮುಖನಾದ ನಂತರ ಈತನ ಮೊದಲ ಮಡದಿ ಲಲಿತೆ ಅವನಿಗಾಗಿ ಊರೂರು ಅಲೆದು ಕೊನೆಗೆ ಅವನನ್ನು ಸೇರಿಸಿಕೊಳ್ಳುತ್ತಾಳೆ. 'ಪ್ರಾಣನೇ, ನನ್ನ ಸರ್ವಸ್ವವೇ! ನಿನ್ನನ್ನು ಈ ಅವಸ್ಥೆಯಲ್ಲಿ ಕಾಣುವಂತಾಯಿತೇ ಎಂದು ರೋಧಿಸಿದಳು. ಇದರಿಂದ ಮರುಕಗೊಂಡ ಖಾನ್ ಅವಳಿಗಾಗಿ ಬ್ರಾಹ್ಮಣನಾಗಲು ಮುಂದಾಗುತ್ತಾನೆ. ಆದರೆ ಮಠದವರ ವಿಳಂಬ ನೀತಿಯಿಂದಾಗಿ ಮನನೊಂದು ತಟಸ್ಥನಾದನು. ಹೀಗಾಗಿ ಆಯುಷೆಯು ಖಾನ್ ಮತಾಂತರಗೊಳ್ಳುವನೆಂದು ಮನನೊಂದು ಅಸುನೀಗಿದರೆ; ಲಲಿತೆಯು ಗಂಡ ನನಗೆ ದೊರಕುವುದಿಲ್ಲವೆಂದು ಕಾವೇರಿಗೆ ಹಾರಿ ಪ್ರಾಣ ಕಳೆದುಕೊಳ್ಳುತ್ತಾನೆ.

ಖಾನ್ ಇಬ್ಬರು ಸತಿಯರ ಶವದ ಮುಂದೆ ರೋಧಿಸುತ್ತ ತಾನೂ ಸಾವಿಗೀಡಾಗುತ್ತಾನೆ. ಇದು 'ಧರ್ಮದುರಂತ' ನಾಟಕದಲ್ಲಾದ ಬದಲಾವಣೆ ಐತಿಹಾಸಿಕ ಸಂಗತಿಗಳನ್ನು ಬದಲಾಯಿಸಿಕೊಂಡ ಎಂ.ಆರ್.ಶ್ರೀ. ಅವರ ದಾಟಿ ನಾಟಕಕ್ಕೆ ಮತ್ತಷ್ಟು ಕಳೆ ತಂದಿದೆ. ನಾಟಕದ ನಾಯಕ ಉದಾತ್ತ ನಾಯಕ. ಇಲ್ಲಿ ಗದ್ಯಪದ್ಯ ಮಿಶ್ರಿತ ಶೈಲಿ ಇದೆ. ಆಯಷೆ ಮತ್ತು ಲಲಿತೆಯರು ಆದರ್ಶ ಪಾತ್ರಗಳಾಗಿವೆ. ಇತಿಹಾಸವನ್ನು ತಿರುಚಿದರೂ ಸಹ ನಾಟಕ ಯಶಸ್ವಿಯಾದುದಾಗಿದೆ.

**"ಶ್ರೀನಿವಾಸ"**

ಮಾಸ್ತಿ ವೆಂಕಟೇಶ್ ಐಯ್ಯಂಗಾರರು ಶ್ರೀನಿವಾಸ ಎಂಬ ಹೆಸರಿನಿಂದ ಕಾವ್ಯಸೃಷ್ಟಿ ಮಾಡಿದಂತೆಯೇ ಸಾಹಿತ್ಯದ ಇತರ ಪ್ರಕಾರವಾದ ಐತಿಹಾಸಿಕ ನಾಟಕಗಳನ್ನು ರಚಿಸಿದ್ದಾರೆ. ಇವರು ಶಿವಛತ್ರಪತಿ, ತಾಳಿಕೊಟೆ ಮತ್ತು ಕಾಕನಕೋಟೆ ಎಂಬ ಮೂರು ನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲೆಲ್ಲಾ ತಾಳಿಕೋಟೆ ಉತ್ತಮ ನಾಟಕವಾಗಿದೆ. ಇಲ್ಲಿ ಕಾಲ್ಪನಿಕ ಸಂಗತಿಗಳೇ ಹೆಚ್ಚಾಗಿ ಕಂಡುಬರುತ್ತದೆ.

ತಾಳಿಕೋಟೆ ನಾಟಕದಲ್ಲಿ ರಾಮರಾಯನು ಆಯುಷೆಯೆಂಬ ಮಹಮ್ಮದೀಯ ಹೆಣ್ಣನ್ನು ಮೋಹಿಸಿ ಅವಳಲ್ಲಿ ರುಸ್ತುಮನೆಂಬ ಮಗನನ್ನು ಪಡೆದನು. ಆದರೆ ಇದರ ಬಗ್ಗೆ ಯಾರಿಗೂ ಸುಳಿವನ್ನು ಸಹ ನೀಡಿರಲಿಲ್ಲ. ಹಾಗಾಗಿ ಅದು ಯಾರಿಗೂ ತಿಳಿದಿರಲಿಲ್ಲ. ಈತ ಆಯುಷೆಗೆ ಲಗ್ನವಾಗುವುದಾಗಿ ಹೇಳಿ ಮಾತಿಗೆ ತಪ್ಪಿರುತ್ತಾನೆ. ಆಯುಷೆಯನ್ನು ವಿವಾಹವಾಗಬೇಕಿದ್ದ ಉಸ್ಮಾನ್ ಅವಳು ರಾಮರಾಯರೊಂದಿಗೆ ಹೊಂದಿದ ಸಂಬಂಧ ಅರಿತು ಕೋಪಿಷ್ಟನಾಗಿ ರಾಮರಾಯನ ನಾಶಕ್ಕೆ

ಮುಂದಾಗುತ್ತಾನೆ. ಅಲ್ಲದೆ ಅವನ ಮಗನಿಂದಲೇ ಆತನ ಮರಣವಾಗುತ್ತದೆ. ಇವಿಷ್ಟು ನಾಟಕದ ಸಾರಾಂಶ.

ಇಲ್ಲಿ ರಾಮರಾಯ, ಆಯುಷಾ, ರುಸ್ತುಮ್, ತಿರುಮಲಾಂಬಾ ಇವರು ಚಾರಿತ್ರಿಕ ವ್ಯಕ್ತಿಗಳು. ರಾಮರಾಯನ ಪಾತ್ರ ಮುಖ್ಯವಾಗಿ ಕಂಡುಬಂದಿದೆ. ನಾಟಕದಲ್ಲಿ ಲೇಖಕರು ಸಹ ಅವನ ಪಾತ್ರಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾರೆ.

"ರುಸ್ತುಮನು ರಾಮರಾಯನನ್ನು ಕೊಲ್ಲುವುದು ಇತಿಹಾಸ ಪ್ರಸಿದ್ಧವೇ. ಐತಿಹಾಸಿಕ ದೃಷ್ಟಿಯಿಂದ ಅಷ್ಟೂ ಬೆಲೆ ಕೊಡದಿದ್ದರೂ ಕಲಾ ದೃಷ್ಟಿಯಿಂದ, ಸಾಹಿತ್ಯ ದೃಷ್ಟಿಯಿಂದ ಅವರ ನಾಟಕಗಳಲ್ಲಿ ಅದಕ್ಕೆ ಅಗ್ರ ಸ್ಥಾನವನ್ನು ಕೊಡಬಹುದು. ಪಾತ್ರಗಳ ಸ್ವಭಾವ, ನಿರೂಪಣೆಯು ಗುಪ್ತ ಪ್ರೇಮದ ಫಲವಾಗಿ ಅವನು ರುಸ್ತುಮನಿಂದ ಕೊಲೆಯಾದುದು ಅಪಹಾರ್ಯವೆಂಬಂತೆ ಚಿತ್ರಿತವಾಗಿದೆ."[೪] ಎಂದು ಈ ನಾಟಕ ಕುರಿತಂತೆ ರಾಮರಾಯರ ಅಭಿಪ್ರಾಯ.

ಆಯಷಾ ಮತ್ತು ರಾಮರಾಯರ ಪ್ರಣಯ ನಾಟಕದ ಮುಖ್ಯ ಭಾಗ. ರಾಮರಾಯನಿಂದ ವಂಚಿತಳಾದ ಆಯುಷಾಳಿಗೆ ರಸ್ತುಂ ಜನಿಸುತ್ತಾನೆ. ಆದರೂ ಅವಳಿಗೆ ರಾಮರಾಯನ ಮೇಲೆ ಅಚಲವಾದ ಪ್ರೇಮ. ಮುಗ್ಧಮನಸ್ಸಿನ ಮುದ್ದು ಬಾಲೆ, ತನ್ನ ಪವಿತ್ರ ಪ್ರೇಮದಿಂದ ರಾಮರಾಯನನ್ನು ಪಡೆಯಲು ಪರಿತಪಿಸುತ್ತಾಳೆ. ಆದರೆ ಕೊನೆಗೆ ತನ್ನ ಪತಿಯ ಹಿತವನ್ನು ಕೋರುವುದೇ ತನ್ನ ಬಾಳಿನ ಆದರ್ಶವೆಂದಿದ್ದ ಆ ಪರಿಶುದ್ಧ ಮೂರ್ತಿ. ಮರಣದಲ್ಲಿಯೂ ಪತಿಯನ್ನು ಹಿಂಬಾಲಿಸುತ್ತಾಳೆ. ನಾಟಕಕಾರರು ಹೇಳುವಂತೆ ಅರಳಿ ಹಾರದಲ್ಲಿ ಸೇರಿ ದೇವರ ತಲೆಯ ಮೇಲೆ ನಿಲ್ಲಬೇಕಾದ ಮಲ್ಲಿಗೆ ಕೆಟ್ಟಗಾಳಿ ಬೀಸಿ ಕೆಳಗೆ ಬಿದ್ದು ಹೋಗಿ ಬರುವವರ ಕಾಲ ತುಳಿತಕ್ಕೆ ಸಿಕ್ಕಿ ಕೆಟ್ಟಿತು. ಪತಿಪ್ರೇಮದ ಉಚ್ಚ ಆದರ್ಶ ವ್ಯಕ್ತಿಯಾಗಿ ಚಿತ್ರಿತಳಾಗಿದ್ದಾಳೆ ಆಯುಷಾ.

ರಾಮರಾಯನ ಮೋಹ ಅದಮ್ಯವಾಗಿರುವಂತೆ ಅವನ ಪ್ರೀತಿ ನೈಜ ಮತ್ತು ಸರಳವಾಗಿದೆ. ಇದನ್ನು ಕಂಡಾಗ ಆತನ ಅಪರಾಧ ದೊಡ್ಡದೆನಿಸುವುದಿಲ್ಲ. ಅವನಿಗೆ ಸ್ವಲ್ಪವೇ ಧೈರ್ಯವಿದ್ದಿದ್ದರೆ ನಡೆಯುವ ಗಂಡಾಂತರವನ್ನು ನಿಲ್ಲಿಸಬಹುದಾಗಿತ್ತು. ಉಸ್ಮಾನ್ ರಾಮರಾಯನನ್ನು ಅವನ ಮಗ ರುಸ್ತುಂನಿಂದಲೇ ಕೊಲ್ಲಿಸುತ್ತಾನೆ. ನಂತರ ರುಸ್ತುಂ ಮತ್ತು ಅವನ ತಾಯಿ ಸೇರುವ ದೃಶ್ಯ ಅತ್ಯಂತ ಕರುಣರಸದಿಂದ ಕೂಡಿದೆ. ಮತ್ತು ಅವಿಸ್ಮರಣೀಯವಾಗಿದೆ. ಕೆಲವು ದೃಶ್ಯಗಳ ಹೊರತಾಗಿ ನಾಟಕ ಯಶಸ್ವಿಯಾಗಿ ಕಂಡಬಂದಿದೆ.

ಶ್ರೀನಿವಾಸರ ಕಲಾ ಸಾಮರ್ಥ್ಯಕ್ಕೆ ತಕ್ಕಂತೆ ತಾಳಿಕೋಟೆ ನಾಟಕ ಮೂಡಿಬಂದರೆ ಅವರ ಇನ್ನುಳಿದ ಎರಡು ನಾಟಕಗಳು ಸಹ ನೀರಸವೆನಿಸುತ್ತವೆ. 'ಶಿವಛತ್ರಪತಿ' ನಾಟಕದಲ್ಲಿ ಹಾಳಾಗುತ್ತಿದ್ದ ಹಿಂದುಧರ್ಮದ ಏಳ್ಗೆಗೆ ಅವತಾರ ಪುರುಷನಂತೆ ಜನಿಸಿದ ಶಿವಾಜಿಯಿಂದ ಉಳಿಯಿತು. ಈತನು ಧರ್ಮದ ಉದ್ಧಾರದ ಜೊತೆಗೆ ರಾಜ್ಯವನ್ನು ಕಟ್ಟಿದನು. ಇದೇ ಈ ನಾಟಕದ ಕಥಾವಸ್ತು. "ಶ್ರೀನಿವಾಸರ ಸೃಷ್ಟಿಯೆಂದರೆ ಹೊಂಬಿಸಿಲು, ತಂಗಾಳಿ, ಬೆಳದಿಂಗಳು, ಕೋಕಿಲಗಾನ. ಈ ಸೃಷ್ಟಿಶಕ್ತಿಯ ಮೃದು ಚೇತನಕ್ಕೆ ಬಿರುಗಾಳಿ, ಕಾರ್ಗತ್ತಲೆ, ಬರಸಿಡಿಲುಗಳ ರುದ್ರರಮಣೀಯತೆ ಸಹ್ಯವಾಗದು"[3] ಎಂಬ ರಾಮರಾಯರ ಮಾತು ಸತ್ಯಕ್ಕೆ ಹತ್ತಿರವಾದುದು.

ಕಾಕನಕೋಟೆ ನಾಟಕದಲ್ಲಿ ಬರುವ ಪಾತ್ರಗಳಲ್ಲೆಲ್ಲಾ ಕಂಠೀರವ ನರಸರಾಜ-ರೊಬ್ಬರು ಐತಿಹಾಸಿಕ ವ್ಯಕ್ತಿಗಳು. ಹಾಗಾಗಿ ಇದನ್ನು ಐತಿಹಾಸಿಕ ನಾಟಕವೆಂದು ಪೂರ್ಣಪ್ರಮಾಣದಲ್ಲಿ ಕರೆಯಲಾಗುವುದಿಲ್ಲ. ಈ ನಾಟಕದಲ್ಲಿನ ಪಾತ್ರಗಳು ವರ್ಣಿತ-ವಾಗಿರುವ ಸ್ವಭಾವಕ್ಕೆ ತಕ್ಕಂತಾಗಿವೆ. ಕಾಡುಕುರುಬರು ಕೊಡಬೇಕಾದ ಕಪ್ಪದ ವಿಷಯದಲ್ಲಿ ಅವರಿಗೂ ಹೆಗ್ಗಡದೇವನ ಕೊಟೆಯ ಹೆಗ್ಗಡೆಗೂ ವಿವಾದವುಂಟಾಗಿದ್ದು ಕಾಡುಕುರುಬರ ಮುಖಂಡನಾದ ರಾಚನೆಂಬುವನು ಮೈಸೂರಿನಲ್ಲಿದ್ದು ಮಹಾರಾಜರನ್ನು ಕಂಡವನಾದ್ದರಿಂದ ಅವರ ಮೂಲಕ ತನ್ನ ಜನಕ್ಕೆ ಒದಗಿದ್ದ ಕಷ್ಟವನ್ನು ನಿವಾರಿಸಿಕೊಂಡಂತೆಯೂ ಈ ಕಥಾವಸ್ತುವನ್ನು ಕಲ್ಪಿಸಿಕೊಳ್ಳಲಾಗಿದೆ.

ಇಲ್ಲಿ ಬರುವ ಪಾತ್ರಗಳು ಮತ್ತು ಸಂಭಾಷಣೆಯು ನೈಜವಾಗಿ ಕಾಣಸಿಗುತ್ತದೆ. ನಾಟಕಕಾರರು ಅವರ ಎಷ್ಟೋ ಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಅವರ ಜನಜೀವನ ನೋಟವನ್ನು ಸಂಭಾಷಣೆಯಲ್ಲಿ ತಂದಿದ್ದಾರೆ. ಒಟ್ಟಿನಲ್ಲಿ ಈ ನಾಟಕ ಕಾಡಿನ ಜನರ ಬದುಕು ಭಾವನೆಯನ್ನು ನಾಗರಿಕರ ಐಶಾರಾಮ ಬದುಕನ್ನು ಸಮೀಕರಿಸಿದಂತಿದೆ.

**ಕುವೆಂಪು:**

ಕುವೆಂಪುರವರ ರಕ್ತಾಕ್ಷಿ ಮತ್ತು ಬಿರುಗಾಳಿ ನಾಟಕಗಳು ರೂಪಾಂತರಗಳಾದರೂ ಸಹ ಐತಿಹಾಸಿಕ ಸಂಗತಿಗಳನ್ನು ಒಳಗೊಂಡು ಮಹತ್ವದ ನಾಟಕಗಳೆನಿಸಿವೆ. ಇವರ ರಕ್ತಾಕ್ಷಿಗೆ ಐತಿಹಾಸಿಕ ನಾಟಕಗಳ ಸಾಲಿನಲ್ಲಿ ಹಿರಿಯ ಸ್ಥಾನವಿದೆ. ರಕ್ತಾಕ್ಷಿ ಷೇಕ್ಸ್‌ಪಿಯರ್ ಕವಿಯ ಹ್ಯಾಮ್ಲೆಟ್ ಕೃತಿಯನ್ನು ಆಧರಿಸಿದೆಯಾದರೂ ಬಿದನೂರು ಸಂಸ್ಥಾನದ ಕಥೆ ಮೂಲ ಆಕರವಾಗಿದೆ. ಹಾಗೆಯೇ ಷೇಕ್ಸ್‌ಪಿಯರ್‌ನ 'The Tempest' ಕುವೆಂಪುರವರ ಬಿರುಗಾಳಿ ಕೃತಿಗೆ ಸಹಾಯಕವಾಗಿದೆ. ಅದರ ರೂಪಾಂತರವೇ ಬಿರುಗಾಳಿ ನಾಟಕ.

ಕುವೆಂಪುರವರ ನಾಟಕಗಳಲ್ಲಿ ರಕ್ತಾಕ್ಷಿ ಐತಿಹಾಸಿಕವಾಗಿ ಮಹತ್ವದ ಸ್ಥಾನಮಾನವನ್ನು ಪಡೆದುಕೊಂಡಿರುವ ಕೃತಿಯಾಗಿದೆ. ಇಲ್ಲಿ ಭಾವನೆಗಳ ಸಂಕೀರ್ಣ ಕ್ರಿಯೆ ಯಶಸ್ವಿಯಾಗಿ ನಡೆದಿದೆ. ಪ್ರೇಮ ಪ್ರಣಯ, ಸ್ನೇಹ, ಸೇಡು, ವಂಚನೆ, ತ್ಯಾಗ, ಕ್ರೌರ್ಯ, ಮೋಹ, ಮಾತ್ಸರ್ಯಗಳೆಲ್ಲ ಸಮ್ಮಿಲನಗೊಂಡಿವೆ. ಈ ಕೃತಿ ರಂಗದ ಮೇಲೆ ಪ್ರದರ್ಶನಗೊಳ್ಳಲು ಯೋಗ್ಯವಾದ ನಾಟಕವಾಗಿದೆ. ಬಿದನೂರು ನಾಯಕನ ಮರಣಾನಂತರ ಆತನ ರಾಜ್ಯ ದುರ್ನಡತೆಗೆ ಬೀಳಲು ಹೈದರನು ಆ ರಾಜ್ಯವನ್ನು ನುಂಗಿ ನೀರುಕುಡಿದ ಕಥೆಯನ್ನಾಧರಿಸಿ ಈ ನಾಟಕ ರಚಿತಗೊಂಡಿದೆ. ಅಭಿನಯದ ದೃಷ್ಟಿಯಿಂದಲೂ ಈ ನಾಟಕ ಹೆಚ್ಚು ಪ್ರದರ್ಶನಗೊಂಡು ಯಶಸ್ವಿ ನಾಟಕವೆನಿಸಿದೆ. ಅಲ್ಲದೆ ಷೇಕ್ಸ್‌ಪಿಯರ್‌ನ ನಾಟಕದೊಂದಿಗೆ ಇರುವ ಹೋಲಿಕೆಗಳು ಹಲವು ವಿವಾದಕ್ಕೆ ದಾರಿ ಮಾಡಿಕೊಟ್ಟಿವೆ. ಕೆಲವರು ಇದೊಂದು ಸ್ವತಂತ್ರ ನಾಟಕವೆಂದರೆ ಹಲ ಕೆಲವರು ಇದು ಹ್ಯಾಮ್ಲೆಟ್ ನಾಟಕದಿಂದ ಪ್ರಭಾವಿತವಾಗಿ ಬರೆದ ನಾಟಕವಾಗಿದೆ ಎಂದಿದ್ದಾರೆ.

ಶ್ರೀ ಎ.ಆರ್.ಕೃ. ಅವರು ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕ ಸಂಘ ಆರಂಭವಾದಾಗ ಉಪನ್ಯಾಸ ನೀಡಿ ಮೈಸೂರು ದೇಶದ ಚರಿತ್ರೆಗೆ ಸಂಬಂಧಿಸಿದ ಕೆಲವು ವಸ್ತುಗಳನ್ನು ಸೂಚಿಸಿಅದರ ಮೇಲೆ ಕಾದಂಬರಿ, ನಾಟಕಗಳನ್ನು ಬರೆಯುವಂತೆ ಸೂಚಿಸಿದ್ದಾಗಿಯೂ ಈ ಸೂಚನೆಯನ್ನನುಸರಿಸಿ ಕುವೆಂಪು ಅವರು 'ರಕ್ತಾಕ್ಷಿ'ಯನ್ನು ರಚಿಸಿದ್ದಾಗಿಯೂ ತಿಳಿದುಬರುತ್ತದೆ. ರಕ್ತಾಕ್ಷಿಯ ಮುನ್ನುಡಿಯಲ್ಲಿ ಎ.ಆರ್.ಕೃ. ಅವರೇ ಈ ಬಗ್ಗೆ ಬರೆದಿದ್ದಾರೆ."[೬]

ಬಿದನೂರಿನ ಬಸಪ್ಪನಾಯಕ ಮರಣ ಹೊಂದಲು ಆತನ ರಾಣಿ ನಿಂಬಯ್ಯನೊಂದಿಗೆ ಅಕ್ರಮ ಸಂಬಂಧ ಬೆಳೆಸಿದಳು. ಇದಕ್ಕೆ ಅಡ್ಡಲಾಗಿದ್ದ ತನ್ನ ಮಗ ಚೆನ್ನಬಸವಯ್ಯನನ್ನು ಕತ್ತುಮುರಿಸಿ ಜಟ್ಟಿಯಿಂದ ಕೊಲ್ಲಿಸಿ ಸೋಮಶೇಖರನೆಂಬುವನನ್ನು ದತ್ತು ತೆಗೆದುಕೊಂಡಳು. ಆದರೆ ಹ್ಯಾಮ್ಲೆಟ್ ನಾಟಕದ ಕತೆಯೇ ಬೇರೆ ಅಣ್ಣನ ಹೆಂಡತಿಯಲ್ಲಿ ಮೋಹಗೊಂಡ ಪರಮನೀಚ ಮೋಸದಿಂದ ಅಣ್ಣನನ್ನು ಕೊಂದು ಅತ್ತಿಗೆಯ ಕೈಹಿಡಿಯುತ್ತಾಳೆ. ಇವರ ಮಗ ಹ್ಯಾಮ್ಲೆಟ್ ತನ್ನ ತಂದೆಯ ಸಾವು ಸಹಜವಲ್ಲ ಮತ್ತು ತನ್ನ ತಾಯಿಯ ಅಕ್ರಮ ಸಂಬಂಧ ತಿಳಿದೂ ಪ್ರತಿಭಟಿಸಲಾಗದೆ ಸುಮ್ಮನಿರಬೇಕಾಗುತ್ತದೆ.

ಕುವೆಂಪುರವರು ಈ ಕತೆಯನ್ನು ಬಳಸಿ ತಮ್ಮ ರಕ್ತಾಕ್ಷಿ ನಾಟಕವನ್ನು ಉತ್ತಮ ಪಾತ್ರ ಚಿತ್ರಣ ಹಾಗೂ ನಿರೂಪಣಾ ಶೈಲಿಯಿಂದ ರಚಿಸಿದ್ದಾರೆ. ಬಸವಯ್ಯನೊಡನೆ ಮಂತ್ರಿಯ ಮಗಳಾದ ರುದ್ರಾಂಬೆಯ ಪ್ರೇಮ, ಹಾಗೂ ಪ್ರೇಮದ ಕಲ್ಪನೆ ರಕ್ತಾಕ್ಷಿಯಲ್ಲಿ ಕಾಣಿಸಿಕೊಂಡಿದೆ. ಹ್ಯಾಮ್ಲೆಟ್ ಪ್ರಭಾವದಿಂದ ಪ್ರೇತದ ಕಲ್ಪನೆ ಬಂದಿರುವುದು ನಿಜ.

ಆದರೂ ಹೋಲಿಕೆಗಳು ಏನೇ ಇದ್ದರು ಸಹ ವಿವರಣೆಯಲ್ಲಿ ರಕ್ತಾಕ್ಷಿಗೂ ಹ್ಯಾಮ್ಲೆಟ್‌ಗೂ ಅಜಗಜಾಂತರ ವ್ಯತ್ಯಾಸವಿದೆ.

"ಇಂಗ್ಲಿಷ್ ಸಾಹಿತ್ಯವು, ಇಂಗ್ಲಿಷ್ ಭಾಷೆಯ ಮೂಲಕ ಪರಿಚಯವಾದ ವಿಶ್ವಸಾಹಿತ್ಯವು, ಆಧುನಿಕ ಕನ್ನಡ ಸಾಹಿತ್ಯಕ್ಕೆ, ಆಧುನಿಕ ಸಕಲ ಭಾರತೀಯ ಸಾಹಿತ್ಯಕ್ಕೂ ಪ್ರಾಣದಾಯಕವಾಗಿದೆ. ರಘುವಂಶ ನೈಷಧಗಳನ್ನು ಓದಿ ರವೀಂದ್ರನಾಥರೂ ಹರ್ಷ ಚರಿತೆ ಕಾದಂಬರಿಗಳನ್ನು ಓದಿ ಅಷ್ಟೆ ಬಂಕಿಮಚಂದ್ರರೂ ಎಂದಿಗೂ ಆಗುತ್ತಿರಲಿಲ್ಲ. ಹಾಗೆಯೇ ಶಾಕುಂತಲ ಪ್ರತಿಮಾ ನಾಟಕಗಳನ್ನು ಗಟ್ಟಿ ಮಾಡಿ ಪುಟ್ಟಪ್ಪನವರು 'ರಕ್ತಾಕ್ಷಿ'ಯನ್ನು ಬರೆಯಲಾಗುತ್ತಿರಲಿಲ್ಲ"[2] ಎಂಬ ಎ.ಆರ್.ಕೃಷ್ಣಶಾಸ್ತ್ರಿಯವರ ಮಾತು ಕುವೆಂಪುರವರ ಸಾಹಿತ್ಯವನ್ನು ತಿಳಿಯುವುದರಿಂದ ವಿತವಾಗುತ್ತದೆ.

ರಕ್ತಾಕ್ಷಿಯಲ್ಲಿ ಅನೇಕ ಭಾಗ ಕವಿಯ ಸ್ವಂತಸೃಷ್ಟಿ, ಶಿವಯ್ಯ ರುದ್ರಾಂಬೆಯನ್ನು ಮೋಹಿಸುವುದು, ಇದಕ್ಕಾಗಿ ಬಸವಯ್ಯನ ಕೊಲೆ ಮಾಡಿಸುವುದು. ಬಸವಯ್ಯ ಹೊನ್ನಯ್ಯರ ಸ್ನೇಹ, ಮಹಾತ್ಮರ ವೇಷದಲ್ಲಿ ರಾಮರಾಯನ ಕೆಲಸ, ರುದ್ರಭಯಂಕರ ರುದ್ರಾಂಬೆಯ ಪಾತ್ರ ಮುಂತಾದ ಸಂದರ್ಭ ಕವಿ ಸೃಷ್ಟಿ ಇವುಗಳು ಮನೋಹರವಾಗಿ ಕಾಣಿಸುತ್ತವೆ.

ಕುವೆಂಪುರವರ ಮಹಾರಾತ್ರಿ ಕೂಡ ಬುದ್ದನ ಚರಿತ್ರೆಯನ್ನು ಆಧರಿಸಿ ರಚನೆಯಾದ ನಾಟಕ. ಬುದ್ಧನನ್ನು ಕುರಿತು ಕನ್ನಡದಲ್ಲೂ ಅನೇಕ ನಾಟಕಗಳು ರಚನೆಗೊಂಡಿವೆ. ಅವುಗಳಲ್ಲಿ ಪ್ರಮುಖವಾದವು ಬಿ.ಪುಟ್ಟಸ್ವಾಮಯ್ಯರ ಗೌತಮಬುದ್ಧ, ಇದು ಬುದ್ದನ ಜೀವಿತದ ಪೂರ್ಣಾವಧಿಯ ಮೇಲೆ ಬೆಳಕು ಚೆಲ್ಲುವಂತದ್ದು. ಮಾಸ್ತಿಯವರ 'ಯಶೋಧರ ಮತ್ತು ಗೋವಿಂದ', 'ಪೈ'ರವರ 'ವೈಶಾಖ' ಬುದ್ದನನ್ನು ಕುರಿತ ಪ್ರಮುಖ ಕೃತಿಗಳು. ನಾಟಕಕ್ಕೆ ಮಹಾರಾತ್ರಿ ಎಂಬ ಹೆಸರು ಅರ್ಥಪೂರ್ಣ-ವಾಗಿದೆ. ಸಿದ್ಧಾರ್ಥ ಬುದ್ಧನಾಗುವಲ್ಲಿ ತೆಗೆದುಕೊಳ್ಳುವ ದೃಢಸಂಕಲ್ಪ ಮತ್ತು ಅದು ಕಾರ್ಯರೂಪಕ್ಕೆ ಬರುವುದು ಚಿತ್ರಿತವಾಗಿದೆ. ಸಿದ್ಧಾರ್ಥ ಮತ್ತು ಅವನ ಮಡದಿ ಮಕ್ಕಳು ರಾಜ್ಯದ ವ್ಯಾಮೋಹ ತೊರೆದು ಹೋಗುವ ಸನ್ನಿವೇಶ ಈ ನಾಟಕದ ವಸ್ತುವಾಗಿದೆ. ನಾಟಕದ ಆರಂಭದಲ್ಲಿ ಕಿನ್ನರ ಪಾತ್ರದ ಮೂಲಕವಾಗಿ ಮಹಾರಾತ್ರಿ ಎಂಬ ಹೆಸರು ಪ್ರಯೋಗವಾಗಿದೆ. ಮನದ ಪರಿವರ್ತನೆಯ ಮಹಾಪರಿವರ್ತನೆಯ ರಾತ್ರಿಯನ್ನು ಕುವೆಂಪು ಮಹಾರಾತ್ರಿ ಎಂದು ಕರೆದಿರುವುದು ಸಮಂಜಸವಾದುದು.

**ರಂ.ಶ್ರೀ.ಮುಗಳಿ:** ರಂಶ್ರೀ ಮುಗಳಿಯವರು 'ವಿಜಯ ಸಾಮ್ರಾಜ್ಯ' ಮತ್ತು 'ಸೇವಾ ಪ್ರದೀಪ' ಎಂಬ ಎರಡು ನಾಟಕಗಳನ್ನು ರಚಿಸಿದ್ದಾರೆ. ಈ ಎರಡು ನಾಟಕಗಳು ಸಹ ವಿಜಯನಗರ ಸಾಮ್ರಾಜ್ಯದ ಚಾರಿತ್ರಿಕ ಕಥಾವಸ್ತುವನ್ನು ಒಳಗೊಂಡಿದೆ ವಿಜಯನಗರದ ಆರಂಭ ಹಾಗೂ ಬೆಳವಣಿಗೆಯನ್ನು ವಿಜಯಸಾಮ್ರಾಜ್ಯ ನಾಟಕದಲ್ಲಿ ಚಿತ್ರಿಸಲಾಗಿದೆ.

ಲೇಖಕರು ತಾವು ಕಂಡ ಇತಿಹಾಸದ ಸತ್ಯವನ್ನು ವಿಮರ್ಶಾತ್ಮಕ ದೃಷ್ಟಿಯಿಂದ ನಿರೂಪಿಸಿದ್ದಾರೆ.

"ಹಿಂದೂ ಮಹಮ್ಮದೀಯರ ಸಂಬಂಧವನ್ನು 'ಕಂಟಕಪ್ರಾಯವಾಗದೆ ಪ್ರಯೋಜನಕಾರಿ ಯಾಗುವಂತೆ ಎಚ್ಚರದಿಂದ ವರ್ತಿಸುವ ಪ್ರಸಂಗವನ್ನಾಗಿ ಚಿತ್ರಿಸಬೇಕೆಂಬ ಕಾರ್ಯ ಶ್ರೀ ಮುಗಳಿಯವರ ಲೇಖನದಲ್ಲಿ ಸಾರ್ಥಕಗೊಂಡಿದೆ. ವೇಷ ಬದಲಾಯಿಸುವ ಪ್ರಸಂಗ ಬಂದಾಗ ಬಹಾವುದ್ದೀನನು ಬ್ರಹ್ಮಾನಂದನಾಗಿ 'ಬ್ರಹ್ಮಸತ್ಯಂ' ಜನನ್ಮಿಥ್ಯಾ ಎಂದು ಹೇಳುವುದಕ್ಕೆ ಬದಲಾಗಿ 'ಮಿಥ್ಯಾಬ್ರಹ್ಮ ಸತ್ಯಂ ಜಗತ್' ಎಂದು ತಪ್ಪು ಹೇಳಿದಾಗಲೂ ಬಲ್ಲಾಳನು ಆಯಿತು ಅದನ್ನೇ ಹೇಳು ಹಾಗೆ ಹೇಳಿದರೂ ಜನರಿಗೆ ಅರ್ಥವಾಗುವುದು ಅಷ್ಟರಲ್ಲೇ ಇದೆ. ಅರ್ಥವಾದರೆ ಅವರ ಕಲ್ಯಾಣವಾದೀತು ಎಂಬ ನುಡಿ ಹಾಸ್ಯದ ಮರೆಯಲ್ಲಿ ಲೋಕದ ಟೀಕೆಯಂತಿದೆ. ಇಂತಹ ಪ್ರಸಂಗಗಳು ಇನ್ನೂ ಹಲವಾರಿವೆ. ಆದರೆ ಇವು ಇಂದಿನ ಸಮಾಜದ ಟೀಕೆಗಳಾಗಿರುವಷ್ಟೇ".[೮]

ಎಂ.ನರಸಿಂಹಮೂರ್ತಿಯವರು ರಚಿಸಿರುವ 'ರತ್ನಸಿಂಹಾಸನ' ಗಮನಿಸ–ಬೇಕಾದಂತಹ ಐತಿಹಾಸಿಕಾಂಶಗಳಿಂದ ಕೂಡಿದ ನಾಟಕ. ಭಾಷೆ ಮತ್ತು ದೇಶದ ಅಭಿಮಾನವನ್ನು ಇಟ್ಟುಕೊಂಡು ಜನರಲ್ಲಿನ ಜಡತನವನ್ನು ದೂರವಾಗಿಸುವ ಶಕ್ತಿ ಈ ನಾಟಕದಲ್ಲಿ ಇದೆ. ರಾಜ ಒಡೆಯರು ಅಧಿಕಾರಕ್ಕೆ ಬಂದು ತಮ್ಮ ರಾಜ್ಯ ಸ್ಥಾಪನೆಗಾಗಿ ಮಾಡುವ ಪ್ರಯತ್ನವೇ ನಾಟಕದ ವಸ್ತು. ರಾಜ ಒಡೆಯರು ಅಧಿಕಾರಕ್ಕೆ ಬಂದು ತಮ್ಮ ರಾಜ್ಯ ಸ್ಥಾಪನೆಗಾಗಿ ಮಾಡುವ ಪ್ರಯತ್ನವೇ ನಾಟಕದ ವಸ್ತು ರಾಜ ಒಡೆಯರು ಅಧಿಕಾರಕ್ಕೆ ಬಂದುದು, ಬೆಟ್ಟದ ಚಾಮರಾಜರಲ್ಲಿ ಅಸಮಾಧಾನ ತಂದಿತ್ತು. ಆದರೂ ಅದನ್ನು ತೋರಿಸಿಕೊಳ್ಳದೆ ತಮ್ಮನಿಗೆ ಸಹಾಯಕವಾಗಿ ನಡೆದುಕೊಳ್ಳುತ್ತಿದ್ದರು. ಕೆಂಬಾಳದ ಪಾಳೆಯಗಾರ ರಾಜ ಒಡೆಯರನ್ನು ಕೊಲ್ಲಿಸಲು ಪ್ರಯತ್ನಿಸುತ್ತಾನೆ. ಆದರೆ ಈ ಪ್ರಯತ್ನ ವಿಫಲವಾಗುತ್ತದೆ. ಬೆಟ್ಟದ ಚಾಮರಾಜನ ಕಣ್ಣು ಕೀಳಿಸಿದ್ದು ರಾಜ ಒಡೆಯರಲ್ಲಿ ದುಃಖ ತರಿಸಿ ಅಣ್ಣನಿಗೆ ಹಣನೀಡಿ ಕಳುಹಿಸಿದನು.

ನಾಟಕದಲ್ಲಿ ಜ್ಯೋತಿಲ, ನಂಜಯ್ಯ, ಚಂದ್ರವದನೆ ಮುಂತಾದ ಪಾತ್ರಗಳು ಕವಿಯ ಸೃಷ್ಟಿ ನಾಟಕಕ್ಕೆ ಒಪ್ಪುವಂತದ್ದಾಗಿದೆ. ಚರಿತ್ರಾಂಶವನ್ನು ಬದಲಾಯಿಸಿ ದುರಂತಕ್ಕೆ ತಿರುಗಿಸಿರುವ ಸಂದರ್ಭ ನಾಟಕದಲ್ಲಿದೆ. ಆದರೆ ಇದರ ಉದ್ದೇಶ, ಕಾರಣ ತಿಳಿಯಲಾಗದು.

'ಎಚ್ಚಮನಾಯಕ' ಮತ್ತು 'ವೀರರಾಣಿ ಕಿತ್ತೂರು ರುದ್ರಮ್ಮ' ವೀರ ರಸ ಪ್ರಧಾನವಾದ ಹಾಗೂ ಉತ್ತರ ಕರ್ನಾಟಕದಲ್ಲಿ ಮನೆಮಾತಾದ ಐತಿಹಾಸಿಕ ನಾಟಕಗಳು. ಎರಡು ನಾಟಕಗಳು ಸಹ ಉತ್ತಮ ಸಂಭಾಷಣೆ, ನಿರೂಪಣೆ ಹಾಗೂ ಹಾಡುಗಳಿಂದ ಕೂಡಿದುದಾಗಿದೆ. ಧಾರವಾಡದ ಗಂಡುಭಾಷೆ ಯಶಸ್ವಿಯಾಗಿ ಬಂದಿದೆ.

'ಕಿತ್ತೂರು ರುದ್ರಮ್ಮ' ಎಚ್ಚಮನಾಯಕರಷ್ಟು ಕ್ರಿಯಾಶೀಲವಾದ ನಾಟಕ ವಲ್ಲದಿದ್ದರೂ ರುದ್ರರಮಣೀಯವಾಗಿ ಕಂಡುಬರುತ್ತದೆ. ಮಲ್ಲಸರ್ಜ ಹಾಗೂ ರುದ್ರಮ್ಮ ಮುಂತಾದ ಪಾತ್ರಗಳು ಮನಸ್ಸಲ್ಲಿ ಉಳಿಯುವಂತವು. ಹೀಗೆ ನರಸಿಂಹಮೂರ್ತಿ-ಯವರ ಬರವಣಿಗೆ ಶೈಲಿಯಲ್ಲಿ, ನಾಟಕಗಳು ಉತ್ತಮವಾಗಿ ಚಿತ್ರಿತಗೊಂಡಿವೆ.

ಆಧುನಿಕ ಐತಿಹಾಸಿಕ ನಾಟಕಗಳು ಇಂದು ಯಶಸ್ವಿಯಾಗಿ ಮೂಡಿಬರುತ್ತಿದ್ದು ನಾಟಕಕಾರರು ಚರಿತ್ರಾಂಶಗಳ ಕಡೆ ಹೆಚ್ಚು ಗಮನಹರಿಸುತ್ತಿರುವುದನ್ನು ಕಾಣಬಹುದಾಗಿದೆ. ವಿಶಾಖದತ್ತನ 'ಮುದ್ರರಾಕ್ಷಸ'ವನ್ನು ಹಲವು ನಾಟಕಕಾರರು ಕನ್ನಡಕ್ಕೆ ತಂದಿದ್ದಾರೆ. ಅದರಲ್ಲಿ ಮ.ನ.ಚೌಡಪ್ಪನವರು 'ಚಂದ್ರಗುಪ್ತ' ಎಂಬ ಗದ್ಯನಾಟಕವನ್ನು ರಚಿಸಿದ್ದಾರೆ ಬಹುಮಟ್ಟಿಗೆ ಇದೇ ಕ್ರಮವನ್ನು ಎನ್.ಎಸ್.ನಾರಾಯಣಶಾಸ್ತ್ರಿಗಳು, ಶ್ರೀ ರಂಗರಾವ್ ಹೀರೆಕೆರೂರವರು ಸಹ ಅನುಸರಿಸಿದ್ದಾರೆ. ಶ್ರೀ ರಂಗರಾಯರು ಬಂಗಾಳಿಯಲ್ಲಿನ ದ್ವಿಚಂದ್ರಲಾಲರಾಯ್ ಬರೆದಿರುವ ನಾಟಕ ಹಿಂದಿಗೆ ಭಾಷಾಂತರವಾಗಿ ಅಲ್ಲಿಂದ ಕನ್ನಡಕ್ಕೆ ತಂದಿದ್ದಾರೆ.

ವಿ.ಬ.ಈಶ್ವರರಾವ್‌ರವರು ತೆಲುಗಿನಿಂದ ಭಾಷಾಂತರಿಸಿರುವ 'ತಿಷ್ಯರಕ್ಷಿತೆ' ಅಶೋಕನ ಆಡಳಿತದಲ್ಲಿರುವ ದೋಷಾರೋಪಗಳು ಹಾಗೂ ಬೌದ್ಧಮತದ ಮೇಲಿನ ದ್ವೇಷವನ್ನು ಒಳಗೊಂಡ ನಾಟಕವಾಗಿದೆ. ಡಿ.ವಿ.ಗುಂಡಪ್ಪನವರು ಬರೆದಿರುವ 'ವಿದ್ಯಾರಣ್ಯ ವಿಜಯ'ದಲ್ಲಿ ದೃಶ್ಯ ಕಾವ್ಯ ರೂಪವನ್ನು ತಂದಿದ್ದಾರೆ. ಶಾನುಭೋಗ ವೆಂಕಟರಮಣಯ್ಯನವರು ಬರೆದಿರುವ 'ಯದುರಾಜ ವಿಜಯ' ಮಹಾರಾಜರ ವಂಶಾವಳಿಯಿಂದಲೇ ತೆಗೆದುಕೊಂಡಿದ್ದರೂ ಕಥೆಯ ಬೆಳವಣಿಗೆಯೆಲ್ಲವೂ ಪೌರಾಣಿಕ ಧಾಟಿಯಲ್ಲಿದೆ.

ಗಿರೀಶ್‌ಕಾರ್ನಾಡ್, ಚಂದ್ರಶೇಖರ್ ಕಂಬಾರರು ಸಹ ಐತಿಹಾಸಿಕ ನಾಟಕ ರಚನೆಯಲ್ಲಿ ತಮ್ಮದೇ ಆದ ಸ್ಥಾನ ಗಳಿಸಿದ್ದಾರೆ. ಕಾರ್ನಾಡರ ಮತ್ತು ಕಂಬಾರರ ನಾಗಮಂಡಲ ಉತ್ತಮ ನಾಟಕಗಳು. ಜೋಕುಮಾರಸ್ವಾಮಿ ಕಂಬಾರರಿಂದ ಯಶಸ್ವಿ ರಂಗಪ್ರಯೋಗವಾಗಿ ಮೂಡಿಬಂದಿದೆ. ಒಟ್ಟಿನಲ್ಲಿ ಐತಿಹಾಸಿಕ ಅಂಶವುಳ್ಳ ಈ ನಾಟಕಗಳು ಕನ್ನಡದಲ್ಲೂ ಇನ್ನೂ ಸಾಕಷ್ಟು ಪ್ರಮಾಣದಲ್ಲಿ ಬರಬೇಕಾಗಿದೆ.

## ಅಡಿಟಿಪ್ಪಣಿಗಳು

೧. ತ.ಸು.ಶಾಮರಾಯರು– ಕನ್ನಡ ನಾಟಕ– ಪು. ೨೮೦

೨. ಅದೇ, ಪು. ೨೮೧

೩. ಅದೇ, ಪು. ೨೮೫

೪. ಅದೇ, ಪು. ೨೮೯

೫. ಅದೇ, ಪು. ೨೯೧

೬. ಡಾ. ಮಳಲಿ ವಸಂತಕುಮಾರ್, ಕುವೆಂಪು ನಾಟಕಗಳು ಒಂದು ಅಧ್ಯಯನ, ಪು. ೧೦೭–೧೦೮.

೭. ಅರವಿಂದ ಮಾಲಗತ್ತಿ, ಕುವೆಂಪು ಕೃತಿ ವಿಮರ್ಶೆ, ಪು. ೪೧೭

೮. ತ.ಸು.ಶಾಮರಾಯರು, ಕನ್ನಡ ನಾಟಕ, ಪು. ೨೯೬

****

# ಅಧ್ಯಾಯ - ನಾಲ್ಕು

# ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ ನಾಟಕಗಳ ವಿವೇಚನೆ

**ಹರಳಯ್ಯನ ವಿಜಯ:** ೧೨ ನೇ ಶತಮಾನದಲ್ಲಿ ಬದುಕಿದ್ದ ಶಿವಶರಣರಾದ ಬಸವಣ್ಣ, ಹರಳಯ್ಯ, ಮದುವರಸರು ಮಾಡಿದ ಅಸ್ಪೃಶ್ಯತೆ, ಜಾತೀಯತೆ, ಅಂತರ್‌ಜಾತಿ ವಿವಾಹಗಳಿಗಿರುವ ಸಮಸ್ಯೆಗಳ ವಿರುದ್ಧ ಸಮರ ಮತ್ತು ಸಾಮಾಜಿಕ ಸಮಾನತೆಗಾಗಿ ಅವರ ತತ್ವ ಸಿದ್ಧಾಂತಗಳನ್ನು ಕುರಿತಂತೆ ಈ ನಾಟಕ ರಚಿತವಾಗಿದೆ.

ದೇಜಗೌರವರು ನಾಟಕವನ್ನು ೬ ಅಂಕಗಳಾಗಿ ವಿಭಜಿಸಿ ಸರಳವಾದ ಭಾಷೆಯಲ್ಲಿ ರಚಿಸಿದ್ದಾರೆ. ಒಟ್ಟು ನಾಟಕ ೯೬ ಪುಟಗಳನ್ನು ಒಳಗೊಂಡಿದೆ. ಪುರುಷ ಪಾತ್ರಗಳಾದ ಬಸವಣ್ಣ, ಬಿಜ್ಜಳ, ಹರಳಯ್ಯ, ಮಧುವರಸ, ಅಲ್ಲಮಪ್ರಭು ಮತ್ತು ಸ್ತ್ರೀಪಾತ್ರಗಳಾದ ಕಲ್ಯಾಣಮ್ಮ, ನಾಗಲಾಂಬಿಕೆ, ಮಹಾದೇವಿಯಮ್ಮ ಅಮುಗೆಯ ರಾಯಮ್ಮ ಮುಂತಾದ ಮುಖ್ಯ ಪಾತ್ರಗಳಿವೆ. ಇಲ್ಲಿನ ಸಂಭಾಷಣೆ ಅತ್ಯಂತ ಸ್ವಾರಸ್ಯಕರ ಮತ್ತು ಮನೋಜ್ಞವಾಗಿ ಬಂದಿದೆ.

ನಾಟಕದ ಆರಂಭ ಮೇಳದವರಿಂದ ಆರಂಭವಾಗುತ್ತದೆ. ಮೇಳದ ಮೂಲ ಗ್ರೀಕ್ ರುದ್ರನಾಟಕಗಳಲ್ಲಿ ಕಂಡುಬರುತ್ತದೆ. ಈ ಮೇಳದಿಂದ ನಾಟಕದಲ್ಲಿ ಮುಂದೆ ನಡೆಯುವ ಸಂದರ್ಭ ಪದ್ಯ ರೂಪದಲ್ಲಿ ಮೊದಲೆ ಹಾಡಿನ ಮೂಲಕ ತಿಳಿಯುತ್ತದೆ.

ಹಾಗೆಯೇ ನಮ್ಮ ಸಂಸ್ಕೃತ ನಾಟಕಗಳಲ್ಲಿರುವ ಭಾಗವತ, ಅಶರೀರವಾಣಿಯೂ ಸಹ ಮೇಳದವರು ಮಾಡುವ ಕೆಲಸವನ್ನೇ ಮಾಡುತ್ತವೆ. ಆ ಪ್ರಕಾರವನ್ನೇ ದೇಜಗೌರವರು ತಮ್ಮ ನಾಟಕದಲ್ಲಿಯೂ ಶರಣಮೇಳ ೧,೨ ಎಂಬುದಾಗಿ ಬಳಸಿದ್ದಾರೆ. ದೃಶ್ಯ ಎರಡರಲ್ಲಿ ಮಹಾಶಿವರಾತ್ರಿಯ ಸಡಗರ ಮತ್ತು ಸಂಭ್ರಮ. ಈ ಸಂದರ್ಭದಲ್ಲಿ ವಿಭೂತಿ ಲೇಪಿತನಾದ ಎಂಟು ವರ್ಷದ ಬಸವಣ್ಣ ಮುಂಜಾವಿನಿಂದಲೇ ತದೇಕಚಿತ್ತದಿಂದ ಶಿವನ ವಿಗ್ರಹ ನೊಡುತ್ತ ಶಿವಸ್ಮರಣೆ ಮಾಡುತ್ತಿದ್ದಾರೆ.

ದೇವಾಲಯದ ಮುಂದಿರುವ ವ್ಯಾಪಾರಿಗಳ ಬೀದಿಯ, ಮಕ್ಕಳ ಕ್ರೀಡಾಂಗಣದಲ್ಲಿ ತುಂಬಾ ಗದ್ದಲವಾಗುತ್ತಿದೆ. ಆ ಸಂದರ್ಭದಲ್ಲಿ ದೇವಾಲಯದ ಪೂಜಾರಿಗಳು ಆ ಕಡೆಗೆ ತೆರಳುತ್ತಾರೆ. ಧ್ಯಾನದಿಂದ ಎಚ್ಚೆತ್ತ ಬಸವಣ್ಣನೂ ಅವರನ್ನೇ ಹಿಂಬಾಲಿಸುತ್ತಾನೆ.

ಕೆಳಜಾತಿಯ ಮಕ್ಕಳು ದೇವಾಲಯದ ಸುತ್ತ ಆಡುತ್ತ, ದೇವಾಲಯ ಮತ್ತು ಭಕ್ತರನ್ನು ಮುಟ್ಟಿ ಮೈಲಿಗೆ ಮಾಡಿದ್ದಾರೆಂದು ಬ್ರಾಹ್ಮಣರು ಕೋಪಗೊಂಡಿದ್ದಾರೆ. ಆ

ಮಕ್ಕಳನ್ನು ಮರಕ್ಕೆ ಕಟ್ಟಿ ಬಾರುಕೋಲಿನಿಂದ ಬಡಿಯುತ್ತ ಹೀನಾಮಾನವಾಗಿ ಬೈಯ್ಯುತ್ತಿದ್ದಾರೆ. ಇವರ ಏಟು ತಡೆಯದ ಆ ಮಕ್ಕಳು "ಏಟು ತಪ್ಸಿ ಬುದ್ಧಿ ಹೇಳ್ತೀವಿ ಇನ್ನೀ ಕಡೆಗೆ ತಿರುಗಿ ನೋಡಲ್ಲ"[7] ಎಂದು ತಮ್ಮ ಅಸಹಾಯಕತೆಯನ್ನು ತೋರ್ಪಡಿಸುತ್ತಿದ್ದಾರೆ.

ಏಟು ತಡೆಯಲಾರದ ಮಕ್ಕಳು ಮೂರ್ಛೆ ಬಿದ್ದುದನ್ನು ಕಂಡ ಬಸವಣ್ಣ, ಮುಗ್ಧ ಮಕ್ಕಳನ್ನೇಕೆ ಹೊಡೆಯುವಿರಿ ಎಂದು ತಡೆಯುತ್ತಾನೆ; ಅಲ್ಲದೇ ಶಿವನಲ್ಲಿ ಮಕ್ಕಳ ಗೋಳನ್ನು ಮೊರೆ ಇಡುತ್ತಾರೆ. ಇದನ್ನು ಕಂಡ ಪೂಜಾರಿಗಳು ಕೀಳು ಜಾತಿಯ ಮಕ್ಕಳು ನಮ್ಮನ್ನು ಮುಟ್ಟಿಸ್ಕೊಂಡ್ರೆ ಮೈಲಿಗೆಯಲ್ವೆ, ನಾವು ಅಪವಿತ್ರ ಆಗೋದಿಲ್ವೆ; ಹಾಗಾಗಿ ನೀನು ಅವರನ್ನು ಮುಟ್ಟಿಸ್ಕೋಬೇಡಪ್ಪ ಎನ್ನುವರು.

ಶಿವನ ಬಳಿಯಿರುವ ನಿಮ್ಮಂತವರ ಬಾಯಲ್ಲಿ ಈ ಕೀಳು ಭಾಷೆ ಮತ್ತು ಮನಃಸ್ಥಿತಿ ಬರಬಹುದೆ. ಮೇಲು-ಕೀಳು ಎಂಬುದು ವ್ಯಕ್ತಿಯ ವ್ಯಕ್ತಿತ್ವ ಕೆಲಸ ಗುಣಗಳನ್ನು ಆಧರಿಸಿ ತೀರ್ಮಾನಿಸುವುದು ಎಂಬುದು ಬಸವಣ್ಣನ ಸರಿಯಾದ ನಿಲುವು. ಮೂರ್ಛೆ ಬಿದ್ದ ಮಕ್ಕಳಿಗೆ ನೀರು ತಟ್ಟಿ ಅವರನ್ನು ಎಚ್ಚರಗೊಳಿಸಿಕೊಂಡು ಬಸವಣ್ಣ ಅವರ ಕೇರಿಯ ಕಡೆಗೆ ಹೋಗುತ್ತಾರೆ. ಅಲ್ಲಿದ್ದ ಪೂಜಾರಿ ಮತ್ತು ಭಕ್ತರು ಬಸವಣ್ಣನನ್ನು ಪಂಚಾಯಿತಿ ಕಟ್ಟೆಗೆ ನಿಲ್ಲಿಸಬೇಕೆಂದು ಗೊಣಗುತ್ತ ತೆರಳುತ್ತಾರೆ.

ತಮ್ಮ ಮಕ್ಕಳ ಚಿಂತಾಜನಕ ಸ್ಥಿತಿಯನ್ನು ಕಂಡ ನಾಗ, ಕಾಳ ಗೋಳಿಡುತ್ತಾರೆ. ಮಾದಸಪ್ನೋರ ಮಗ ನೀವು ನಮ್ಮ ಮಕ್ಕಳ ಮುಟ್ಟಿಸ್ಕೋಬಹುದ ಸ್ವಾಮಿ ಎಂದು ಬಸವಣ್ಣನನ್ನು ಕೇಳುತ್ತಾರೆ. ಪ್ರಕೃತಿಯಲ್ಲಿ ದೊರಕೋ ಪ್ರತಿಯೊಂದು ವಸ್ತುಗಳು ಕೂಡ ಮಾನವನಲ್ಲಿ ಯಾವುದೇ ಭೇದಭಾವ ತೋರಿಸೊಲ್ಲ. ಆದರೆ ಒಂದೇ ರಕ್ತ ಹರಿಯೋ ಮನಷ್ಯರು ತರತಮ ಭಾವಗಳನ್ನು ತೋರಿಸ್ತಾರೆ. ಇದು ಮನುಷ್ಯ ಮನುಷ್ಯರ ಮೇಲೆ ನಡೆಸೋ ದೌರ್ಜನ್ಯ ಎಂಬುದು ಬಸವಣ್ಣನ ಉತ್ತರವಾಗಿದೆ.

ಇಂದು ಸಹ ಊರಿನ ಪ್ರಮುಖರು, ಧರ್ಮದರ್ಶಿಗಳು, ಹಿರಿಯರು ಅನ್ನುಸ್ಕೊಂಡೋರು ಮನುಷ್ಯ ಮನುಷ್ಯರ ನಡುವೆ ಜಾತಿ ಧರ್ಮಗಳನ್ನು ಅಡ್ಡ ತರುತ್ತಾರೆ. ನಂತರ ಅಸ್ಪೃಶ್ಯತೆಯ ಆಚರಣೆಗೂ ದಾರಿ ಮಾಡಿಕೊಡುತ್ತಾರೆ. ಮೊದಲು ಇಂತಹವರನ್ನು ಗಡಿಪಾರು ಮಾಡಬೇಕು. ಎರಡು ಮುಗ್ಧ ಜೀವಿಗಳು ಪರಸ್ಪರರು ಪ್ರೀತಿಸಿ ಬದುಕನ್ನು ನಡೆಸಲು ಮುಂದಾದಾಗ ಅವರ ನಡುವೆ ಜಾತಿ, ಧರ್ಮ, ಮತಗಳು ಕಾರಣವಾಗಿ ಮದುವೆಯನ್ನು ನಿಲ್ಲಿಸುತ್ತಾರೆ. ವಿಧಿಯಿಲ್ಲದೆ ಆ ಪ್ರೇಮಿಗಳು ಮನನೊಂದು ಕೊನೆಗೆ ಆತ್ಮಹತ್ಯೆಗೆ ಕೈಹಾಕುತ್ತಾರೆ. ಆದರೆ ಇಂದು ನಗರಗಳಲ್ಲಿ ಇವರ ಪರವಾಗಿ ಅನೇಕ ಸಂಘ-ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿರುವುದು ಉತ್ತಮ ಬೆಳವಣಿಗೆ.

ದೃಶ್ಯ ಮೂರರಲ್ಲಿ ಪೂಜಾರಿಗಳು ಪಂಚಾಯಿತಿ ಕಟ್ಟೆ ಮುಂದೆ ನಡೆದ ಘಟನೆಗೆ ಉಪ್ಪುಕಾರ ಸೇರಿಸಿ ಎಲ್ಲ ತಪ್ಪುಗಳನ್ನು ದಲಿತ ಮಕ್ಕಳ ಮೇಲೆ ಹೊರಿಸುತ್ತಾರೆ. ಅಲ್ಲದೆ ಅವರೆಲ್ಲ ನಾಯಿಗೆ ಹುಟ್ಟಿದೋರು ಎಂಬ ಅವಾಚ್ಯವಾದ ಶಬ್ದಗಳಿಂದ ಬಯ್ಯುತ್ತಾರೆ. ಇದನ್ನು ಸಹಿಸದ ಬಸವಣ್ಣ ಜಾತಿ ವರ್ಣದ ಆಧಾರದ ಮೇಲೆ ಮನುಷ್ಯರನ್ನು ಅಸಹ್ಯವಾಗಿ ಕಾಣುವುದು ಸರಿಯಲ್ಲವೆಂದು ತಿಳಿಸುತ್ತಾನೆ.

ಜಾತಿ, ಧರ್ಮ, ವರ್ಣಾಶ್ರಮ ಪದ್ಧತಿಗಳನ್ನು ಮೇಲು ವರ್ಗದವರು ತಮ್ಮ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿಕೊಂಡು ಕೆಳವರ್ಗದ ಅಸಹಾಯಕ ಜೀವಿಗಳನ್ನು ತಮ್ಮ ಇಚ್ಛೆಯಂತೆ ನಡೆಸಿಕೊಂಡು ಬರುತ್ತಿದ್ದಾರೆ.

ಮೇಲು ವರ್ಗದ ಈ ದೌರ್ಜನ್ಯಗಳನ್ನು ಬಸವಣ್ಣ ಆಕ್ಷೇಪಿಸಿದಾಗ, ನಾವು ಹಿರಿಯರು, ಊರಿನ ಪ್ರಮುಖರು, ನಮ್ಮ ಮುಂದೆ ಹೀಗೆ ಮಾತನಾಡಬಹುದೇ ಎಂದು ಬಸವಣ್ಣನ ತಂದೆಯನ್ನು ಹೆದರಿಸುತ್ತಾರೆ. ಬಸವಣ್ಣನ ಹೊಲಗೇರಿಗೆ ಹೋಗಿದ್ದು, ಅವರನ್ನು ಮುಟ್ಟಿಸಿಕೊಂಡದ್ದು, ಮತ್ತೆ ಬ್ರಾಹ್ಮಣರ ಕೇರಿಗೆ ಬಂದದ್ದು ಇವು ಮೂರು ತಪ್ಪುಗಳು. ತಾನು ಮಾಡಿರೋ ತಪ್ಪನ್ನು ಒಪ್ಪಿಕೊಂಡು ಪ್ರಾಯಶ್ಚಿತ್ತ ಪಡೆಯದಿದ್ದರೆ ಮಗನ ತಪ್ಪಿಗೆ ತಂದೆಯನ್ನು ಊರಿಂದ ಬಹಿಷ್ಕರಿಸಬೇಕಾಗುತ್ತದೆ ಎಂದು ಪಂಚಾಯ್ತಿಯ ಧರ್ಮದರ್ಶಿ ಎನಿಸಿಕೊಂಡವರ ತೀರ್ಮಾನ.

ದೃಶ್ಯ ೪ ರಲ್ಲಿ ಬಸವಣ್ಣನ ತತ್ವ ಸಿದ್ಧಾಂತಗಳೆಲ್ಲ ಆತನ ತಂದೆ ತಾಯಿಗೆ ಹಿಡಿಸಿದರೂ ಸಹ ವ್ಯವಸ್ಥೆಯ ವಿರುದ್ಧ ಹೋರಾಡುವ ಶಕ್ತಿ ಅವರಲ್ಲಿರಲಿಲ್ಲ. ಹಾಗಾಗಿ ಸಂಪ್ರದಾಯವಾದಿಗಳ ನಿಯಮಗಳನ್ನು ಒಪ್ಪಿ ನಡೆಯುವಂತೆ ಬಸವಣ್ಣನನ್ನು ಕೇಳಿಕೊಳ್ಳುತ್ತಾರೆ. ಅಲ್ಲದೆ ನಿನ್ನ ಮುಂಜಿ ಸಮಾರಂಭಕ್ಕೆ ಊರಿನವರನ್ನೆಲ್ಲ ಕರೆದು ನಿನ್ನ ಪರ ಕ್ಷಮೆ ಕೇಳುತ್ತೇನೆ ಎನ್ನುತ್ತಾರೆ.

ಸಮಾಜದಲ್ಲಿರುವ ಜಾತಿವೈಶಮ್ಯ, ಮೇಲು-ಕೀಳೆಂಬ ಭೇದಭಾವ ಅಸಮಾನತೆಗಳಿಂದ ಮನನೊಂದ ಬಸವಣ್ಣ, ಈ ಜಾತಿ, ಧರ್ಮ, ಬ್ರಾಹ್ಮಣತ್ವದ ಆ ಜನಿವಾರ ನನಗಾವುದೂ ಬೇಡವೆಂದು ತಿರಸ್ಕರಿಸುತ್ತಾನೆ. ಅಲ್ಲದೆ ಜಾತವೇದ-ಮುನಿಗಳ ಕರೆಯಂತೆ ತನ್ನ ತಂಗಿ ನಾಗಲಾಂಬಿಕೆಯೊಂದಿಗೆ ಕೂಡಲಸಂಗಮಕ್ಕೆ ಹೋಗುತ್ತಾನೆ.

ಲೇಖಕರು ಅಂಕ ೨ರಲ್ಲಿ ಕೂಡಲ ಸಂಗಮಕ್ಕೆ ಬಂದ ಬಸವಣ್ಣ ಗುರುಗಳೊಂದಿಗೆ ವಿದ್ಯೆ ಕಲಿತಿದ್ದು, ಗಂಗಾಂಬಿಕೆಯೊಂದಿಗೆ ವಿವಾಹವಾದುದು, ಶರಣ ಕಾರ್ಯದಲ್ಲಿ ಮುಳುಗಿದ್ದನ್ನು ಶರಣ ಮೇಳದ ಮೂಲಕ ಹೇಳಿಸಿದ್ದಾರೆ.

ನಾಗಿಮಯನ ಮನೆಯಲ್ಲಿ ಕಕ್ಕಯ್ಯ, ಹರಳಯ್ಯ, ಕಾಳವ್ವೆ, ಕಲ್ಯಾಣಮ್ಮರು ಬಸವಣ್ಣನ ಬರವಿಗಾಗಿ ಕಾಯುತ್ತಿದ್ದಾರೆ. ಅಲ್ಲದೆ ನಗರದಲ್ಲಿ ವ್ಯಾಪಕವಾಗಿರುವ ಬಸವಣ್ಣನ ಕಾಯಕದ ಬಗ್ಗೆ ಚರ್ಚೆ ನಡೆಸುತ್ತಿದ್ದಾರೆ. ಅಷ್ಟರಲ್ಲಿ ಬಸವಣ್ಣನ ಆಗಮನವಾಗುತ್ತದೆ. ಎಲ್ಲರೂ ಶಿವನನ್ನು, ಬಸವೇಶ್ವರರನ್ನು ಮನದಲ್ಲಿ ಸ್ಮರಿಸಿಕೊಳ್ಳುತ್ತಾರೆ.

'ಪರರನ್ನು ಗೌರವಿಸುವುದ ಕಲಿಯದಿದ್ದರೆ ನಾವೆಂದು ದೊಡ್ಡವರಾಗುವುದಿಲ್ಲ' ಎಂಬ ನಾಣ್ನುಡಿಯಂತೆ ಬಸವಣ್ಣನು ಮೇಲು-ಕೀಳು ಕಿರಿಯವರು - ಹಿರಿಯವರು ಎನ್ನದೆ ಎಲ್ಲರನ್ನು ಗೌರವದಿಂದ ಕಾಣುತ್ತಿದ್ದರು. ಕಕ್ಕಯ್ಯನನ್ನು ಕಂಡೊಡನೆ ಅವನಲ್ಲಿ ವಿಶೇಷವಾದ ಭಕ್ತಿ-ಗೌರವ ಬಸವಣ್ಣನಿಗೆ. ಅಲ್ಲದೆ ಕಕ್ಕಯ್ಯನಲ್ಲಿ ಇರುವ ಕೀಳರಿಮೆಗೆ ಮೇಲುವರ್ಗದವರೆ ಕಾರಣ ಎಂದು, ಗುರುಗಳು ಮತ್ತು ಹಿರಿಯರು ಋಷಿಗೆ ಸಮಾನ ಅವರನ್ನು ಗೌರವಿಸುವುದು ಧರ್ಮ ಎನ್ನುತ್ತಾನೆ.

ಹರಳಯ್ಯ, ಕಲ್ಯಾಣಮ್ಮ, ಶೀಲವಂತರು ಅನುಭವ ಮಂಟಪದಲ್ಲಿ ನಡೆದುದನ್ನು ಚರ್ಚಿಸುತ್ತಾ ಹೋಗುತ್ತಿದ್ದಾರೆ. ಮೂಲೆಗುಂಪಾಗಿದ್ದ ಸ್ತ್ರೀಗೆ ಲಿಂಗದ ದೀಕ್ಷೆಕೊಟ್ಟು ಅವಳು ಪುರುಷ ಸಮಾನಳು ಎಂದೆನಿಸದವರು ಬಸವಣ್ಣ ಅಲ್ಲಮರು. ಆದರೆ ಹರಳಯ್ಯ ಕಲ್ಯಾಣಮ್ಮರು ತಾವು ಬಸವಣ್ಣನಿಗೆ ಸರಿಯಾದ ಗೌರವ ತೋರಿಸಿಲ್ಲವೇನೋ ಎಂದು ಮನನೊಂದು ಅದಕ್ಕೆ ತಕ್ಕ ಪ್ರಾಯಶ್ಚಿತ್ತವಾಗಬೇಕೆಂದು ತೀರ್ಮಾನಿಸಿ; ನಮ್ಮ ತೊಡೆಯ ಚರ್ಮದಿಂದ ಅವರಿಗೆ ಪಾದರಕ್ಷೆ ತಯಾರಿಸಿ ಕೊಡಬೇಕೆಂದು ತೀರ್ಮಾನಿಸುತ್ತಾರೆ.

ಮದುವರಸರ ಮನೆಯಂಗಳದಲ್ಲಿ ಮಂಚಣ್ಣ, ನಾರಾಯಣ ಕ್ರಮಿತ ಕೃಷ್ಣಪೆದ್ದಿ, ಕೇಶವಭಟ್ಟ ಮೊದಲಾದವರು ಬಸವಣ್ಣನ ಶರಣ ಕಾಯಕ ಬಿರುಸಾಗಿ ಸಾಗುತ್ತಿರುವುದರಿಂದ ಭಯಭೀತರಾಗುತ್ತಾರೆ. ಈತ ಹುಟ್ಟಿದ ಪವಿತ್ರ ಕುಲ, ಧರ್ಮವನ್ನು ಮಣ್ಣುಪಾಲು ಮಾಡುತ್ತಿದ್ದಾನೆ, ನಮ್ಮ ಹಿರಿಯರೆಲ್ಲರಿಗೂ ಅಗೌರವ ತರುವ ಕಾರ್ಯ ಮಾಡುತ್ತಿದ್ದಾನೆ ಎನ್ನುತ್ತಾರೆ. ದಲಿತರಿಗೆ ಲಿಂಗದೀಕ್ಷೆ ನೀಡುತ್ತ, ವಿಪ್ರರನ್ನು ಬಯ್ಯುತ್ತ ನಾಡಿನಲ್ಲಿ ಅಶಾಂತಿ ಹರಡುತ್ತಿದ್ದಾನೆ. ಅಲ್ಲದೆ ಸ್ತ್ರೀಯರಿಗೂ ಲಿಂಗದೀಕ್ಷೆಕೊಟ್ಟು ನೀವೆಲ್ಲರೂ ಪುರುಷ ಸಮಾನರು ಎನ್ನುತ್ತಿದ್ದಾನೆ. ಇದಕ್ಕೆ ಅಂತ್ಯ ಹಾಡಲೇಬೇಕು ಎಂದು ಎಲ್ಲರೂ ತೀರ್ಮಾನಿಸುತ್ತಾರೆ.

"ಹೊಲೆಯರಲ್ಲಿ ಹೊಲೆಯನಾಗಿ, ಹುಟ್ಟಿಸಿದ ಅಪ್ಪನನ್ನು ಮರೆತು, ಹೊಲೆಯರನ್ನೇ ಅಪ್ಪ, ಅಯ್ಯ ಎಂದು ಕರೆಯುವನಂತೆ"[೨] ಮಹಾಮಂತ್ರಿಯ ಪದವಿ ಮತ್ತು ಖಜಾನೆಯ ಹಣವನ್ನು ಲೂಟಿ ಮಾಡುತ್ತಿದ್ದಾನೆ ಇದು ಸರಿಯಲ್ಲ, ಮಂಚಣ್ಣನಿಗೆ ಸಿಗಬೇಕಾದ ಮಂತ್ರಿ ಪದವಿಯನ್ನು ತಾನೇ ಕಸಿದುಕೊಂಡನೆಂದು ಆರೋಪಿಸುತ್ತಾ;

ಬಸವಣ್ಣನನ್ನು ಅಧಿಕಾರದಿಂದ ಕೆಳಗಿಳಿಸಿ ಆ ಸ್ಥಾನವನ್ನು ಮಂಚಣ್ಣನಿಗೆ ಸಿಗುವಂತೆ ಮಾಡಬೇಕೆಂದು ಪುರೋಹಿತರು ಮತ್ತು ಮಹಾಮಾತ್ಯರ ತೀರ್ಮಾನ.

ಬಸವೇಶ್ವರರ ಮಹಾಮನೆಗೆ ಹರಳಯ್ಯ ಮತ್ತು ಕಲ್ಯಾಣಮ್ಮ ತಮ್ಮ ಚರ್ಮದಿಂದ ತಯಾರಿಸಿದ ಪಾದುಕೆಗಳನ್ನು ಬಸವಣ್ಣನಿಗೆ ನೀಡಲು ತಂದಿದ್ದಾರೆ. ಬಸವಣ್ಣರನ್ನು ಕಂಡು ನಮ್ಮ ತಪ್ಪಿನ ಪ್ರಾಯಶ್ಚಿತಕ್ಕಾಗಿ ಪಾದರಕ್ಷೆಗಳನ್ನು ದಯಮಾಡಿ ಸ್ವೀಕರಿಸುವಂತೆ ಕೇಳಿಕೊಳ್ಳುತ್ತಾರೆ. ಆದರೆ ಬಸವಣ್ಣನು ತಾವು ಯಾವುದೇ ತಪ್ಪನ್ನು ಮಾಡಿಲ್ಲ. ಹಾಗಾಗಿ ಈ ಪವಿತ್ರ ಪಾದುಕೆಗಳು ಸಂಗಮನ ಸನ್ನಿಧಿಗೆ ಸೇರತಕ್ಕವೆಂದು ಅಲ್ಲಿಗೆ ತಲುಪಿಸಲು ಹೇಳುತ್ತಾನೆ.

ಹರಳಯ್ಯ, ಕಲ್ಯಾಣಮ್ಮ ಆ ಪಾದುಕೆಗಳನ್ನು ರಾಜಬೀದಿಯಲ್ಲಿ ತರುವಾಗ ಮದುವರಸ ಅವರನ್ನು ನಿಂದಿಸಿ ಬಲತ್ಕಾರದಿಂದ ಪಾದುಕೆಗಳನ್ನು ಪಡೆದು ಧರಿಸುತ್ತಾನೆ. 'ಮಾಡಬಾರದ್ದನ್ನು ಮಾಡಿದ್ರೆ ಆಗಬಾರದ್ದೇ ಆಗೋದು" ಅನ್ನೋ ಹಾಗೆ ಆ ಪವಿತ್ರ ಪಾದುಕೆಗಳನ್ನು ಧರಿಸಿದ ಮದುವರಸ ಮೈಯುರಿಯನ್ನು ತಾಳಲಾರದೆ ವಿಲವಿಲ ಒದ್ದಾಡುವಂತಾಗುತ್ತದೆ.

ಬಸವಣ್ಣನ ಸಲಹೆಯಂತೆ ಮದುವರಸರ ಮಗಳು ನೀಲಾ ಹರಳಯ್ಯರ ಮನೆಯಿಂದ ನೀರು ತರಲು ಹೋಗುತ್ತಾಳೆ. ವಿಷಯ ತಿಳಿದ ಹರಳಯ್ಯ ಮದುವರಸರ ಯೋಗಕ್ಷೇಮ ವಿಚಾರಿಸಲು ನೀಲಾಳೊಂದಿಗೆ ಬರುತ್ತಾನೆ. ಶರಣರ ಭಕ್ತಿಯ ಮಹಿಮೆಯಿಂದ ಪಾಠ ಕಲಿತ ಮದುವರಸ ಸಂಪೂರ್ಣವಾಗಿ ಬದಲಾಗಿ ಶರಣರಲ್ಲಿ ತಾನೊಬ್ಬನಾಗಲು ಬಯಸುತ್ತಾನೆ. ಅಲ್ಲದೆ ತನ್ನ ಮಗಳನ್ನು ಮದುವರಸರ ಮಗನಿಗೆ ಕೊಟ್ಟು ವಿವಾಹ ಮಾಡಲು ತೀರ್ಮಾನ ಮಾಡುತ್ತಾನೆ. ಬಸವಣ್ಣನ ಕ್ರಾಂತಿಯ ಕಹಳೆಯಂತೆ ಅಂತರ್‌ಜಾತಿಯ ವಿವಾಹ ಹರಳಯ್ಯ ಮತ್ತು ಮದುವರಸರಿಂದ ನೆರವೇರುವಂತಾಗುತ್ತದೆ.

ಅಂಕ ೪ರಲ್ಲಿ ಪ್ರಭುದೇವರ ಅಧ್ಯಕ್ಷತೆಯಲ್ಲಿ ಎಲ್ಲಾ ಶರಣರು ಸೇರಿ ತಮ್ಮ ಕಾರ್ಯವೈಖರಿ ಬಗ್ಗೆ ಚರ್ಚೆ ನಡೆಸುತ್ತಿದ್ದಾರೆ. ಲಿಂಗ, ಜಾತಿ, ಧರ್ಮಗಳ ಭೇದವಿಲ್ಲದೆ ನಡೆಸುತ್ತಿರುವ ಬಸವಣ್ಣನ ಶರಣತತ್ವದ ಬಗ್ಗೆ ಎಲ್ಲ ಶರಣರಿಂದ ಬಾಯ್ತುಂಬ ಹೊಗಳಿಕೆಯ ಮಾತುಗಳು ಬರುತ್ತವೆ. ಈ ಶರಣ ಸಭೆಯಲ್ಲಿ ಎಲ್ಲರೂ ಒಂದೆ, ಇಲ್ಲಿ ಲಿಂಗದ ತಾರತಮ್ಯವಿಲ್ಲ. ಶಿವಶರಣ ಮತ್ತು ಶರಣೆಯರು ಸಮಾನ ಮನಸ್ಸಿನಿಂದ ತಮ್ಮ ಅನುಭವವನ್ನು ಎಲ್ಲ ಶರಣರೊಡನೆ ಹಂಚಿಕೊಳ್ಳಬಹುದು. ಅದರಂತೆ ಮಹಾದೇವಿಯಕ್ಕ, ಅಮುಗೆಯರಾಯಮ್ಮ, ಲಕ್ಕಮ್ಮ, ಮಹಾದೇವಿಯಮ್ಮರು ಸಂವಾದದಲ್ಲಿ ಭಾಗವಹಿಸುತ್ತಾರೆ.

ಶರಣರ ಸಭೆಯಲ್ಲಿ ನೀಲ ಮತ್ತು ಶೀಲವಂತರ ಅಂತರ್‌ಜಾತೀಯ ವಿವಾಹದ ಪ್ರಸ್ತಾಪವಾದಾಗ, ಪ್ರಭುದೇವರು ಇದರಿಂದ ಸಮಾಜದಲ್ಲಿ ಅಹಿತಕರ ಘಟನೆ ಜರುಗುವುದಿಲ್ಲವೆ ಎಂದಾಗ "ಬಸವಣ್ಣ: ಇಲ್ಲವೆನ್ನಲಾಗದು ಸಂಘರ್ಷದಿಂದಲ್ಲದೆ ಪ್ರಗತಿಯಾಗಲಿ ಕ್ರಾಂತಿಯಾಗಲಿ ಸಾಧ್ಯವಿಲ್ಲ ಪ್ರಭು"[೩] ಎನ್ನುತ್ತಾರೆ ಈ ಮಾತು ಸರಿಯಾದುದೇ ಆಗಿದೆ. ಅಲ್ಲಿ ನೆರೆದ ಸಭಿಕರಿಂದಲೂ ಸಹ ಒಮ್ಮತದ ಅಭಿಪ್ರಾಯ ಸಿಗುತ್ತದೆ.

ಅಂಕ ೫ರಲ್ಲಿ ಬಿಜ್ಜಳನ ಅರಮನೆಯ ರಹಸ್ಯ ಕೋಣೆಯಲ್ಲಿ ಬಿಜ್ಜಳ, ಮಂಚಣ್ಣ, ನಾರಾಯಣ ಕ್ರಮಿತ, ಕೇಶವಭಟ್ಟ ಮುಂತಾದವರು ಬಸವಣ್ಣನ ಕಾಯಕದ ಬಗ್ಗೆ ಚರ್ಚಿಸುತ್ತಿದ್ದಾರೆ. ಬಿಜ್ಜಳನ ತಿಳಿಯಾದ ಮನಸ್ಸಿನಲ್ಲಿ ಮಂಚಣ್ಣನಾದಿಯಾಗಿ ಎಲ್ಲರೂ ಇಲ್ಲಸಲ್ಲದ ಆರೋಪಗಳನ್ನು ಬಸವಣ್ಣನ ಮೇಲೆ ಮಾಡುತ್ತಿದ್ದಾರೆ. ಅನುಭವ ಮಂಟಪದಲ್ಲಿ ಕ್ರಾಂತಿಯ ಹೆಸರಿನಲ್ಲಿ ಪಿತೂರಿ ನಡೆಸಲಾಗುತ್ತಿದೆ, ಬಸವಣ್ಣನಿಗೆ ರಾಜರ ಮೇಲೆ ಸ್ವಲ್ಪವೂ ಗೌರವವಿಲ್ಲ, ಅಲ್ಲದೆ ನಾಡಿನಲ್ಲಿ ನಡೆಯುತ್ತಿರುವ ಅಂತರ್‌ಜಾತಿಯ ವಿವಾಹದಿಂದಾಗಿ ಸಂಪ್ರದಾಯವಾದಿಗಳು ರೊಚ್ಚಿಗೆದ್ದಿದ್ದಾರೆ. ಒಟ್ಟಿನಲ್ಲಿ ನಾಡಿನ ತುಂಬೆಲ್ಲ ಅಶಾಂತಿ ತುಂಬಿ ತುಳುಕುತ್ತಿದೆ; ಹೀಗಾಗಿ ರಾಜರು ಒಂದು ನ್ಯಾಯ ಸಭೆ ಕರೆದು ತೀರ್ಮಾನ ಮಾಡಬೇಕೆಂದು ಹೇಳುತ್ತಾರೆ.

ನ್ಯಾಯ ಸಭೆಯಲ್ಲಿ ಬಿಜ್ಜಳ, ಮಹಾಮಾತ್ಯರು, ಅಪರಾಧಿಸ್ಥಾನದ ಶರಣರಾದಿಯಾಗಿ ಎಲ್ಲರೂ ಇದ್ದಾರೆ. ಶರಣರು ಮಾಡುತ್ತಿರುವ ವರ್ಣಸಾಂಕರ್ಯ, ಅಂತರ್‌ಜಾತಿಯ ವಿವಾಹ ಇತ್ಯಾದಿಯಾಗಿ ನಾಡಿನಲ್ಲಿ ಅಶಾಂತಿ ತಾಂಡವವಾಡುತ್ತಿದೆ. ಇದು ಮುಂದುವರೆದಲ್ಲಿ ಅಲ್ಲೋಲ ಕಲ್ಲೋಲದ ಪರಿಸ್ಥಿತಿ ಉಂಟಾಗುತ್ತದೆ. ಹೀಗಾಗಿ ಶರಣರು ತಮ್ಮ ತಪ್ಪೊಪ್ಪಿಕೊಂಡು ನಡೆಯಬೇಕು. ಇಲ್ಲದಿದ್ದಲ್ಲಿ ಘೋರ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ ಎನ್ನುತ್ತಾರೆ.

ಜಾತಿ ವರ್ಣಗಳು ಮಾನವ ಕೃತ್ರಿಮ, ಶಿವಶರಣರೊಂದಿಗಿನ ನಮ್ಮ ಸಂಬಂಧ ಮತ್ತು ಸಧರ್ಮಿಯವಾದ ನಂಟಸ್ಥಿಕೆ ನ್ಯಾಯಯುತವಾದುದೇ ಆಗಿದೆ. ಹೀಗಾಗಿ ತಪ್ಪೊಪ್ಪಿಗೆಯ ಪ್ರಸ್ತಾಪ ಇಲ್ಲವೆಂದು ಹರಳಯ್ಯ ಮದುವರಸರ ನಿರ್ಣಯವಾಗಿದೆ. ಆದರೆ ಪೂರ್ವಸಿದ್ಧತೆಯಂತೆ ಮಂಚಣ್ಣ, ನಾರಾಯಣ ಮುಂತಾದ ಜಾತಿವಾದಿಗಳು ಅಧಿಕಾರದ ಆಸೆಗಾಗಿ ಬಿಜ್ಜಳನ ತಲೆಕೆಡಿಸಿ ಶಿವಶರಣರಿಗೆ ಶಿಕ್ಷೆ ಆಗಲೇಬೇಕೆಂದು ವಾದಮಾಡುತ್ತಾರೆ. "ಶರಣರಿಗೆ ಮರಣವೇ ಮಹಾನವಮಿ' ಹಾಗಾಗಿ ಶಿವಶರಣರು ಎಲ್ಲಕ್ಕೂ ಸಿದ್ಧವಾಗಿದ್ದಾರೆ. ಅವರಿಗೆ ಶಿವತತ್ವ ಉಳಿದರೆ ಸಾಕು. ಅಂದಿನ ಸಭೆ ಮುಂದಿನ ದಿನಕ್ಕೆ ಮುಂದೂಡಲಾಗಿ ಮಹಾಮಾತ್ಯರು ಗುಪ್ತಸಭೆ ನಡೆಸಿ ನಾಳಿನ ಕಾರ್ಯದ ಬಗ್ಗೆ ತೀರ್ಮಾನ ಕೈಗೊಳ್ಳುತ್ತಾರೆ.

ಮಹಾಮಾತ್ಯರ ಪೂರ್ವನಿಯೋಜಿತ ಕಾರ್ಯದಂತೆ ಬಿಜ್ಜಳ ಎಲ್ಲಕ್ಕೂ ಸಮ್ಮತಿಸಲಾಗಿ ಶಿವಶರಣರಿಗೆ ಶಿಕ್ಷೆಯಾಗುತ್ತದೆ. ಇದರ ಪರಿಣಾಮದಿಂದ ಮುಂದಾಗುವ ಅವಗಡವನ್ನು ನೆನೆದ ಮಹಾಮಾತ್ಯರು ಬಸವಣ್ಣನನ್ನು ಗಡಿಪಾರು ಮಾಡುವಂತೆ ಬಿಜ್ಜಳನಿಗೆ ತಿಳಿಸುತ್ತಾರೆ. ಇದರಿಂದ ಶಿವಶರಣರು ಮೆತ್ತಗಾಗುತ್ತಾರೆ ಎಂಬುದು ಅವರ ನಿರ್ಣಯ. ನಿಸ್ಸಹಾಯಕ ಮನಸ್ಸಿನ ಬಿಜ್ಜಳ ಅದಕ್ಕೂ ಸಮ್ಮತಿಸುತ್ತಾರೆ.

ಇದರಿಂದ ರೊಚ್ಚಿಗೆದ್ದ ಶಿವಶರಣರು ಬಿಜ್ಜಳನನ್ನು ಕೊಲೆಗೈಯ್ಯುತ್ತಾರೆ. ಸಂಪ್ರದಾಯಸ್ತ ಚಾಡಿಕೋರರಿಂದ ಹರಳಯ್ಯ ಮದುವರಸ ಶೀಲವಂತರಿಗೆ ಆನೆಕಾಲಿಗೆ ಕಟ್ಟಿ ಎಳೆ ಹೊಟ್ಟೆ ಶಿಕ್ಷೆ ವಿಧಿಸಲಾಗುತ್ತದೆ. ಬಸವಣ್ಣ ಧ್ಯಾನ ಮಾಡುವಾಗಲೇ ಅವನ ಆತ್ಮ ಶಿವನಲ್ಲಿಗೆ ಸೇರುತ್ತದೆ. ಇದು ಲೇಖಕರು ಮಾಡಿಕೊಂಡ ಬದಲಾವಣೆಯಾಗಿದೆ.

ದೇಜಗೌರವರು ಮೂಲದ ಕಥೆಯನ್ನು ಬಳಸಿ ಹವಲು ಬದಲಾವಣೆಯನ್ನು ತಮ್ಮ ನಾಟಕದಲ್ಲಿ ಮಾಡಿಕೊಂಡಿದ್ದಾರೆ. ಇದು ಮೂಲಕ್ಕೆ ಶೋಭೆಯೆ ಹೊರತು ಎಲ್ಲೂ ಲೋಪವನ್ನು ಕಾಣಲಾಗುವುದಿಲ್ಲ. ಅಲ್ಲದೆ ಹೊಸ ರೀತಿಯಲ್ಲಿ ಹಲವು ಸನ್ನಿವೇಶಗಳು ಚಿತ್ರಿತವಾಗಿದೆ. ಅಚ್ಚುಕಟ್ಟಾದ ವಿವರಣಾ ಶೈಲಿ, ಕಥಾನಿರೂಪಣೆ ಇಲ್ಲಿದೆ. ಹರಳಯ್ಯನ ಪಾತ್ರಕ್ಕೆ ಇಲ್ಲಿ ವಿಶೇಷ ಮೆರಗನ್ನು ಲೇಖಕರು ನೀಡಿದ್ದಾರೆ.

## ಹೊಯ್ಸಳೇಶ್ವರಿ ಶಾಂತಲಾ ಒಂದು ವಿವೇಚನೆ

ಹನ್ನೆರಡನೆಯ ಶತಮಾನದ ಕೊನೆಯ ಭಾಗದಲ್ಲಿ ಚಾಲುಕ್ಯ ಸಾಮ್ರಾಜ್ಯದ ಪತನದ ನಂತರ ಅಧಿಕಾರಕ್ಕೆ ಬಂದವರು ಹೊಯ್ಸಳರು. ಕರ್ನಾಟಕವನ್ನಾಳಿದ ಅನೇಕ ರಾಜಮನೆತನಗಳಲ್ಲಿ ಪ್ರಭಾವಿ ಹಾಗೂ ಕನ್ನಡ ನಾಡಿದ ಜನತೆ ಮತ್ತು ನಾಡಿನ ಏಳ್ಗೆಗೆ ದುಡಿದ ರಾಜಮನೆತನವಿದು. ವಿಷ್ಣುವರ್ಧನ ಮತ್ತು ಶಾಂತಲೆಯರಿಗೆ ಆ ಮನೆತನದಲ್ಲಿ ಪ್ರಮುಖ ಸ್ಥಾನ ದೊರೆತಿದೆ.

ಲೇಖಕರು ಈ ನಾಟಕದಲ್ಲಿ ವಿಷ್ಣುವರ್ಧನನ ದಕ್ಷ ಆಡಳಿತ ಮತ್ತು ಕನ್ನಡ ನಾಡಿನ ಏಳ್ಗೆಗೆ ಆತನ ಶ್ರಮ ಹಾಗೂ ಶಾಂತಲೆಯ ಕಲಾ ಸಾಮರ್ಥ್ಯ, ಶೌರ್ಯ ಮುಂತಾದವುಗಳನ್ನು ಚಿತ್ರಿಸಿದ್ದಾರೆ. ಈ ನಾಟಕವು ೯ ಅಂಕಗಳಲ್ಲಿ ೧೦೮ ಪುಟಗಳಿಂದ ಕೂಡಿ ಮಹತ್ವಪೂರ್ಣವಾಗಿ ರಚಿತಗೊಂಡಿದೆ. ಹಾಗೂ ಶಾಂತಲೆ ಮತ್ತು ವಿಷ್ಣುವರ್ಧನನ ಪಾತ್ರಕ್ಕೆ ಬೆಳಕು ಚೆಲ್ಲಲಾಗಿದೆ.

ನಾಟಕದ ಆರಂಭ ಭರತಮಾತೆ ಮತ್ತು ಭುವನೇಶ್ವರಿಯರ ಸಂಭಾಷಣೆ-ಯೊಂದಿಗೆ ಆರಂಭವಾಗುತ್ತದೆ. ಇದು ಭರತ ಭೂಮಿಯ ಮಹತ್ವ ಮಹಿಮೆ, ಹಾಗೂ ಕನ್ನಡ ನಾಡಿನ ಸಮೃದ್ಧ ಬದುಕನ್ನು ತಿಳಿಸುತ್ತದೆ. ಮೇಲಿನ ಇಬ್ಬರು ತಾಯಂದಿರು

ತಮ್ಮ ಮಕ್ಕಳಾದ ರಾಜಮನೆತನ ಹಾಗೂ ಸಾಮಾನ್ಯ ಜನತೆಯ ಯೋಗಕ್ಷೇಮದ ಬಗೆಗೆ ಚರ್ಚಿಸುತ್ತಾರೆ.

ಸಂಗೀತ, ನೃತ್ಯ, ಕಲೆಗಳ ಪ್ರದರ್ಶನಕ್ಕಾಗಿ ಏರ್ಪಟ್ಟಿರುವ ಕಾರ್ಯಕ್ರಮ ವೀಕ್ಷಿಸಲು ವಿಷ್ಣುವರ್ಧನ, ರಾಜಮಾತೆ ಹಾಗೂ ನಾಡಿನ ಎಲ್ಲಾ ಕಲಾಸಕ್ತರು ಸೇರಿದ್ದಾರೆ. ಎಲ್ಲರೂ ಶಾಂತಲೆಯ ಕಲಾ ನೈಪುಣ್ಯಕ್ಕೆ ಮಾರುಹೋಗಿ ಮೂಕ ವಿಸ್ಮಿತರಾಗಿದ್ದಾರೆ.

ಸಂಗೀತ ನೃತ್ಯಗಳು ಮುಗಿಯುತ್ತಿದ್ದಂತೆ ಸಂಗೀತ ಸರಸ್ವತಿಗೆ ಜಯವಾಗಲಿ, ನಾಟ್ಯರಾಣಿಗೆ ಜಯವಾಗಲಿ ಎಂದು ಎಲ್ಲೆಡೆ ಕೂಗು ಕೇಳಿಸುತ್ತದೆ. ಶಾಂತಲೆಯ ಕಲೆಗೆ, ಕಲಾರಸಿಕರಿಂದ ಗೌರವ ಸಿಗುತ್ತದೆ. ಸ್ವತಃ ವಿಷ್ಣುವರ್ಧನನೆ ಶಾಂತಲೆಯನ್ನು ಅಭಿನಂದಿಸುತ್ತಾನೆ.

ಗುಡಾರಕ್ಕೆ ಸೇರಿದ ನಂತರ ವಿಷ್ಣುವರ್ಧನನ ತಾಯಿ ಏಚಲಾದೇವಿ ಮತ್ತು ಚಾಲುಕ್ಯ ಚಕ್ರವರ್ತಿ ಚಂದಲೆಯರು ಶಾಂತಲೆಯ ರೂಪ, ಲಾವಣ್ಯ ಮತ್ತು ಆಕೆಯ ಪ್ರತಿಭಾ ಸಾಮರ್ಥ್ಯದ ಬಗ್ಗೆ ಮೆಚ್ಚಿ ಚರ್ಚಿಸುತ್ತಾರೆ.

"ಅವಳು ಹಾಡುವಾಗ ಜಡವಸ್ತುಗಳಲ್ಲಿ ಪ್ರಾಣ ಸಂಚಾರವಾದಂತೆ, ಅವಳೊಡನೆ ಅವೂ ಹಾಡುತ್ತಿದ್ದಂತೆ ಇಡೀ ಮಂದಿರ ನಾದಮಯವಾಗಿತ್ತು. ಸ್ವರ್ಗೀಯ ಮಾಧುರ್ಯದಲ್ಲಿ ಜನ ಮೈಮರೆತಂತೆ ಅವರ ಉಸಿರು ನಿಂತಂತೆ ಅವರ ಸರ್ವೇಂದ್ರಿಯಗಳು ಶ್ರವಣೇಂದ್ರಿಯವಾಗಿದ್ದಂತೆ ಅನುಭವವಾಗುತ್ತಿತ್ತು."[೪] ಎಂಬುದು ಶಾಂತಲೆ ಕುರಿತ ಏಚಲೆಯ ಮೆಚ್ಚುಗೆಯ ಮಾತುಗಳಾಗಿದ್ದವು. ಅಲ್ಲದೆ ಏಚಲೆ ಮತ್ತು ಚಂದಲೆಯರು ವಿಷ್ಣುವರ್ಧನನಿಗೆ ಶಾಂತಲೆ ತಕ್ಕ ಜೋಡಿ, ಅವಳೇ ರಾಜರ ಕೈಹಿಡಿದರೆ ಒಪ್ಪು ಎಂದು ಅಪೇಕ್ಷೆಪಡುತ್ತಾರೆ. ಅಷ್ಟರಲ್ಲಿ ವಿಷ್ಣುವರ್ಧನನು ಆಗಮಿಸುತ್ತಾನೆ.

ಚಾಲುಕ್ಯರು ಮತ್ತು ಗಂಗರು ಹೊಯ್ಸಳರೊಂದಿಗೆ ಇಟ್ಟಿದ್ದ ಪ್ರೀತಿ ಬಾಂಧವ್ಯದ ಬಗ್ಗೆ, ಎರೆಯಂಗ ಸಲ್ಲಿಸಿದ ಸೇವೆಯ ಬಗ್ಗೆ ಚಂದಲೆ ಮತ್ತು ವಿಷ್ಣುವರ್ಧನರು ಸ್ಮರಿಸುತ್ತಾರೆ. ವಿಷ್ಣುವರ್ಧನ ಸೌಮ್ಯಸ್ವಭಾವಿ, ಮಾತೃ ಮತ್ತು ಹಿರಿಯರನ್ನು ನಾಡಿನ ಜನತೆಯನ್ನು ಗೌರವಾದರಗಳಿಂದ ಕಾಣುವವನು. ಅವನ ಅಧಿಕಾರ ಹಾಗೂ ವ್ಯಕ್ತಿತ್ವದ ಬಗ್ಗೆ ನಾಡಿನ ಜನತೆಗೆ ಅಪಾರ ನಂಬಿಕೆ. ಈ ಸಮಯದಲ್ಲಿ ಶಾಂತಲೆಯ ತಂದೆ ಮಾರಸಿಂಗ ಮತ್ತು ತಾಯಿ ಮಾಚಿಕಬ್ಬೆಯರ ಆಗಮನವಾಗುತ್ತದೆ. ಅನಂತರ ಎಲ್ಲರೂ ಒಟ್ಟಾಗಿ ಭೋಜನಕ್ಕೆ ತೆರಳುತ್ತಾರೆ.

ದೃಶ್ಯ ಮೂರರಲ್ಲಿ ಪುರುಷವೇಷಧಾರಿ ಬಿಲ್ವಿದ್ಯಾ ಪರಿಣತನಾರು ಎಂಬುದು ಎಲ್ಲರ ಕುತೂಹಲಕ್ಕೆ ಎಡೆಮಾಡಿಕೊಡುತ್ತದೆ. ಅಷ್ಟರಲ್ಲಿ ಏಚಲಾದೇವಿ ಅವಳನ್ನು

ಗುರುತಿಸಿ, ನೆನ್ನೆಯ ಕೋಮಲೆ ಶಾಂತಲೆ ಇವಳೇ ಎನ್ನುತ್ತಾಳೆ. ಈಕೆಯ ಶೌರ್ಯ ಪ್ರತಾಪಗಳು ಅಪರಿಮಿತವಾದುದು ಎಂದು ಏಚಲೆ ಮೆಚ್ಚುಗೆಯ ಮಾತುಗಳನ್ನಾಡುತ್ತಾಳೆ.

ಹಲವು ಆಕರ್ಷಕ ಗುಣ, ಶೌರ್ಯ ಪ್ರತಾಪಗಳು ಒಬ್ಬರಲ್ಲೇ ಕೇಂದ್ರಕೃತವಾಗಿದ್ದರೆ ಎಲ್ಲರಿಗೂ ಅವರ ಬಗ್ಗೆ ಹೆಚ್ಚು ಆಸಕ್ತಿ. ಈಕೆಗೆ ಎಲ್ಲ ಗುಣಕ್ಕೆ ಮಾರುಹೋದ ಏಚಲೆ ಮತ್ತು ಚಂದಲೆಯರು ವಿಷ್ಣುವರ್ಧನನೊಂದಿಗೆ ವಿವಾಹ ಮಾಡಿಸಬೇಕೆಂದು ಬಯಸುತ್ತಾರೆ.

ಶಾಂತಲೆಯ ಕಲಾಸಾಮರ್ಥ್ಯ ವೀಕ್ಷಿಸಿದ ವಿಷ್ಣುವರ್ಧನ ಮತ್ತು ಗಂಗರಾಜರು ಮುಂದೆ ಈಕೆ ಹೊಯ್ಸಳ ಸಾಮ್ರಾಜ್ಯದ ಪ್ರಗತಿಗೆ ಸಹಾಯಕಳಾಗುವಳೆಂದುಕೊಳ್ಳುತ್ತಾರೆ. ಅನಂತರ ಅವಳಿಗೆ ಗೌರವ ಹಾಗೂ ಉಡುಗೊರೆ ದೊರಕುತ್ತದೆ. ತರುವಾಯ ಶಾಂತಲೆ ತಂದೆ–ತಾಯಿ, ಜನ್ಮಭೂಮಿ ಹಾಗೂ ನಾಡಿನ ಜನತೆಯನ್ನು ಕುರಿತಂತೆ ಗೌರವ ನುಡಿಗಳನ್ನಾಡುತ್ತಾಳೆ.

ಚಂದಲೆಯ ಗುಡಾರದಲ್ಲಿ ಏಚಲೆ, ಚಂದಲೆ, ಶಾಂತಲೆಯರು ಸೇರಿದ್ದಾರೆ. ಈ ಸಮಯದಲ್ಲಿ ಶಾಂತಲೆಯ ವಿನಯಪೂರ್ವಕ ನುಡಿಗಳು ಎಂತಹವರನ್ನೂ ಅವಳೆಡೆಗೆ ಸೆಳೆಯುವಂತೆ ಮಾಡುವುವು. "ಪೂಜಾ ಸಮಯದಲ್ಲಿ ಆ ಉಡುಪು ಅನಿವಾರ್ಯ, ಉಳಿದ ಸಮಯದಲ್ಲಿ ಅದು ಅಹಂಕಾರದ ಸಂಕೇತವಾಗುತ್ತದೆ ದೊಡ್ಡವರ ದರ್ಶನ ಸಮಯದಲ್ಲಿ ನಡೆನುಡಿಗಳಲ್ಲಿ ಸಾಮಾನ್ಯರಂತಿರಬೇಕಾದ್ದು ಧರ್ಮ"[೫] ಎಂಬುದು ಶಾಂತಲೆಯ ವಿನಯಪೂರ್ವಕ ನುಡಿಗಳು.

ಶಾಂತಲೆಯ ಸ್ತ್ರೀಪರ ಕಾಳಜಿ ಮತ್ತು ದೃಢಸಂಕಲ್ಪದ ಅನೇಕ ಗುಣಗಳಿವೆ. ಅವಳ ಎಲ್ಲ ರೀತಿಯ ಬೆಳವಣಿಗೆಗೆ ಇದು ಪೂರಕವಾಗುವುದು. ಆಕೆಯ ಪ್ರಕಾರ ಸ್ತ್ರೀ ಅಬಲೆಯಲ್ಲ ಪುರುಷ ಸಮಾನಗಳು. ಮಾನವ ಸಹಜ ಗೌರವಾದರಗಳು, ಮೌಲ್ಯಗಳು, ಅವಳಿಗೂ ದೊರಕಬೇಕೆನ್ನುತ್ತಾಳೆ.

ಶಾಂತಲೆಯಲ್ಲಿದ್ದ ಸೌಮ್ಯಸ್ವಭಾವ, ಅವಳ ಸಕಲ ಕಲಾವಲ್ಲಭ ಗುಣಗಳಿಂದ ವಿಷ್ಣುವರ್ಧನ ಮೊದಲೇ ಆಕರ್ಷಿತನಾಗಿರುತ್ತಾರೆ. ಏಚಲೆ ಮತ್ತು ಚಂದಲೆ ಅದೇ ಅಭಿಪ್ರಾಯವನ್ನು ತಿಳಿಸಿದಾಗ ವಿಷ್ಣು ಮನಃಪೂರ್ವಕವಾಗಿ ಒಪ್ಪುತ್ತಾನೆ. ಈ ವಿಷಯ ತಿಳಿದ ಶಾಂತಲೆಯ ತಂದೆ–ತಾಯಿಯರ ಕಣ್ಣಲ್ಲಿ ಆನಂದಭಾಷ್ಪ ಉಂಟಾಗುತ್ತದೆ.

ಅಂಕ ೨ರಲ್ಲಿ ವಿಷ್ಣುವರ್ಧನ ಮತ್ತು ಶಾಂತಲೆಯರ ವಿವಾಹ ಸಂದರ್ಭ ಅತ್ಯಂತ ವೈಭವಯುತವಾದ ವರ್ಣನೆಯಿಂದ ಕೂಡಿದೆ. ಆ ಸಮಯದಲ್ಲಿ ಊರಿನ ಪ್ರತಿಯೊಂದು ಮನೆಯೂ ಮದು ಮನೆಯಾಗಿ ಸಿಂಗರಗೊಂಡಿರುತ್ತದೆ. ಊರಿಗೆ

ಗುರುತಿಸಿ, ನೆನ್ನೆಯ ಕೋಮಲೆ ಶಾಂತಲೆ ಇವಳೇ ಎನ್ನುತ್ತಾಳೆ. ಈಕೆಯ ಶೌರ್ಯ ಪ್ರತಾಪಗಳು ಅಪರಿಮಿತವಾದುದು ಎಂದು ಏಚಲೆ ಮೆಚ್ಚುಗೆಯ ಮಾತುಗಳನ್ನಾಡುತ್ತಾಳೆ.

ಹಲವು ಆಕರ್ಷಕ ಗುಣ, ಶೌರ್ಯ ಪ್ರತಾಪಗಳು ಒಬ್ಬರಲ್ಲೇ ಕೇಂದ್ರಕೃತವಾಗಿದ್ದರೆ ಎಲ್ಲರಿಗೂ ಅವರ ಬಗ್ಗೆ ಹೆಚ್ಚು ಆಸಕ್ತಿ. ಈಕೆಗೆ ಎಲ್ಲ ಗುಣಕ್ಕೆ ಮಾರುಹೋದ ಏಚಲೆ ಮತ್ತು ಚಂದಲೆಯರು ವಿಷ್ಣುವರ್ಧನನೊಂದಿಗೆ ವಿವಾಹ ಮಾಡಿಸಬೇಕೆಂದು ಬಯಸುತ್ತಾರೆ.

ಶಾಂತಲೆಯ ಕಲಾಸಾಮರ್ಥ್ಯ ವೀಕ್ಷಿಸಿದ ವಿಷ್ಣುವರ್ಧನ ಮತ್ತು ಗಂಗರಾಜರು ಮುಂದೆ ಈಕೆ ಹೊಯ್ಸಳ ಸಾಮ್ರಾಜ್ಯದ ಪ್ರಗತಿಗೆ ಸಹಾಯಕಳಾಗುವಳೆಂದುಕೊಳ್ಳುತ್ತಾರೆ. ಅನಂತರ ಅವಳಿಗೆ ಗೌರವ ಹಾಗೂ ಉಡುಗೊರೆ ದೊರಕುತ್ತದೆ. ತರುವಾಯ ಶಾಂತಲೆ ತಂದೆ-ತಾಯಿ, ಜನ್ಮಭೂಮಿ ಹಾಗೂ ನಾಡಿನ ಜನತೆಯನ್ನು ಕುರಿತಂತೆ ಗೌರವ ನುಡಿಗಳನ್ನಾಡುತ್ತಾಳೆ.

ಚಂದಲೆಯ ಗುಡಾರದಲ್ಲಿ ಏಚಲೆ, ಚಂದಲೆ, ಶಾಂತಲೆಯರು ಸೇರಿದ್ದಾರೆ. ಈ ಸಮಯದಲ್ಲಿ ಶಾಂತಲೆಯ ವಿನಯಪೂರ್ವಕ ನುಡಿಗಳು ಎಂತಹವರನ್ನೂ ಅವಳೆಡೆಗೆ ಸೆಳೆಯುವಂತೆ ಮಾಡುವುವು. "ಪೂಜಾ ಸಮಯದಲ್ಲಿ ಆ ಉಡುಪು ಅನಿವಾರ್ಯ, ಉಳಿದ ಸಮಯದಲ್ಲಿ ಅದು ಅಹಂಕಾರದ ಸಂಕೇತವಾಗುತ್ತದೆ ದೊಡ್ಡವರ ದರ್ಶನ ಸಮಯದಲ್ಲಿ ನಡೆನುಡಿಗಳಲ್ಲಿ ಸಾಮಾನ್ಯರಂತಿರಬೇಕಾದ್ದು ಧರ್ಮ"[೫] ಎಂಬುದು ಶಾಂತಲೆಯ ವಿನಯಪೂರ್ವಕ ನುಡಿಗಳು.

ಶಾಂತಲೆಯ ಸ್ತ್ರೀಪರ ಕಾಳಜಿ ಮತ್ತು ದೃಢಸಂಕಲ್ಪದ ಅನೇಕ ಗುಣಗಳಿವೆ. ಅವಳ ಎಲ್ಲ ರೀತಿಯ ಬೆಳವಣಿಗೆಗೆ ಇದು ಪೂರಕವಾಗುವುದು. ಆಕೆಯ ಪ್ರಕಾರ ಸ್ತ್ರೀ ಅಬಲೆಯಲ್ಲ ಪುರುಷ ಸಮಾನಗಳು. ಮಾನವ ಸಹಜ ಗೌರವಾದರಗಳು, ಮೌಲ್ಯಗಳು, ಅವಳಿಗೂ ದೊರಕಬೇಕೆನ್ನುತ್ತಾಳೆ.

ಶಾಂತಲೆಯಲ್ಲಿದ್ದ ಸೌಮ್ಯಸ್ವಭಾವ, ಅವಳ ಸಕಲ ಕಲಾವಲ್ಲಭ ಗುಣಗಳಿಂದ ವಿಷ್ಣುವರ್ಧನ ಮೊದಲೇ ಆಕರ್ಷಿತನಾಗಿರುತ್ತಾರೆ. ಏಚಲೆ ಮತ್ತು ಚಂದಲೆ ಅದೇ ಅಭಿಪ್ರಾಯವನ್ನು ತಿಳಿಸಿದಾಗ ವಿಷ್ಣು ಮನಃಪೂರ್ವಕವಾಗಿ ಒಪ್ಪುತ್ತಾನೆ. ಈ ವಿಷಯ ತಿಳಿದ ಶಾಂತಲೆಯ ತಂದೆ-ತಾಯಿಯರ ಕಣ್ಣಲ್ಲಿ ಆನಂದಭಾಷ್ಪ ಉಂಟಾಗುತ್ತದೆ.

ಅಂಕ ೨ರಲ್ಲಿ ವಿಷ್ಣುವರ್ಧನ ಮತ್ತು ಶಾಂತಲೆಯರ ವಿವಾಹ ಸಂದರ್ಭ ಅತ್ಯಂತ ವೈಭವಯುತವಾದ ವರ್ಣನೆಯಿಂದ ಕೂಡಿದೆ. ಆ ಸಮಯದಲ್ಲಿ ಊರಿನ ಪ್ರತಿಯೊಂದು ಮನೆಯೂ ಮದು ಮನೆಯಾಗಿ ಸಿಂಗರಗೊಂಡಿರುತ್ತದೆ. ಊರಿಗೆ

ಊರೇ ಚಪ್ಪರ ತಳಿರುತೋರಣಗಳಿಂದ ಸಿಂಗರಿಸಿದಂತೆ ಕಾಣುತ್ತಿದೆ. ಇಂತಹ ಸಮಯದಲ್ಲಿ ಹೊಯ್ಸಳರ ಸಿರಿಯನ್ನು ನೋಡಿ ತುಳುವ, ಕೊಂಗಾಳ್ವ, ಚೆಂಗಾಳ್ವ ಉಚ್ಚಂಗಿಯ ಸಾಮಂತರು ಪರಸ್ಪರ ಮಾತನಾಡಿಕೊಳ್ಳುತ್ತಾರೆ. ಒಟ್ಟಿನಲ್ಲಿ ಈ ವಿವಾಹ ವೈಭವ ಹಾಗೂ ವಧುವರರ ಜೋಡಿ ಹೊಯ್ಸಳ ಸಾಮ್ರಾಜ್ಯದ ಕಣ್ಣು ಕುಕ್ಕುವಂತಿತ್ತು. ವಂದಿಮಾಗಧರ ಪೋಷಣೆಯೊಂದಿಗೆ ವಿವಾಹ ಮೂಹೂರ್ತವು ಅದ್ದೂರಿಯಾಗಿ ಮುಗಿಯುವುದು. ಸಾವಿರಾರು ಜನರು ವಿವಾಹಭೋಜನ ಸವಿದು, ವಧುವರರನ್ನು ಆಶೀರ್ವದಿಸುತ್ತಾರೆ.

ವಿವಾಹ ಮುಗಿದು ೬ ತಿಂಗಳ ನಂತರ ಹೊಯ್ಸಳ ನಾಡು ಸುಭೀಕ್ಷವಾಗಿದೆ. ನಾಡಿನ ಜನತೆ ರಾಜರಾಣಿಯರ ಆಡಳಿತವನ್ನು ಬಾಯ್ತುಂಬ ಹೊಗಳುತ್ತಾರೆ. ನೆರೆಹೊರೆಯ ರಾಜ್ಯವ ಪ್ರಜೆಗಳು ಇವರಂತಹ ಆಡಳಿತಗಾರರು ನಮಗೂ ದೊರಕಬಾರದೇ ಎಂದುಕೊಳ್ಳುತ್ತಿದ್ದಾರೆ. ಕೆಲವರು ಶಾಂತಲೆಯ ಕಾಲ್ಗುಣದಿಂದ ನಮ್ಮ ನಾಡು ಸೌಮ್ಯವಾಗಿದೆ. ಮಳೆಬೆಳೆ ಕಾಲಕಾಲಕ್ಕೆ ಆಗುತ್ತಿದೆ ಎನ್ನುತ್ತಾರೆ.

ದಕ್ಷಿಣ ಕರ್ನಾಟಕದಲ್ಲಿ ೪ ಶತಮಾನಗಳ ಕಾಲ ಆಳ್ವಿಕೆ ನಡೆಸಿ ಜೈನಧರ್ಮಕ್ಕೆ ಪೋಷಣೆ ನೀಡಿದ ಗಂಗರು, ಚೋಳರ ದಾಳಿಗೆ ತುತ್ತಾಗಿದ್ದರು. ಇವರದು ಅಹಿಂಸಾ ತತ್ವವನ್ನು ಒಳಗೊಂಡ ಆಡಳಿತ. ಇಂತಹ ಸುಸಮಯದಲ್ಲಿ ಚೋಳರು ಅವರನ್ನು ಸೋಲಿಸಿ ದಿಕ್ಕಾಪಾಲು ಮಾಡುತ್ತಾರೆ. ಆಗ ಆಶ್ರಯ ನೀಡಿದ್ದು ಹೊಯ್ಸಳರು. ಹಾಗಾಗಿ ಗಂಗರಾಜರು ವಿಷ್ಣುವರ್ಧನ ಮತ್ತು ರಾಜಮಾತೆಗೆ ವಿನಯದಿಂದ ನಡೆದುಕೊಳ್ಳುವರು. ಗಂಗರು ಹೊಯ್ಸಳರ ಅಭ್ಯುದಯಕ್ಕೆ ಪರೋಕ್ಷವಾಗಿ ಕಾರಣಕರ್ತರಾಗುತ್ತಾರೆ.

ಗಂಗ ಸಾಮ್ರಾಜ್ಯ ಕರ್ನಾಟಕದ ನೈಜ ಅವಿಭಾಜ್ಯ ಅಂಗ. ಅದು ಹೊಯ್ಸಳರಿಗೆ ಸೇರಿದರೆ ಗಂಗವಂಶ ಪರೋಕ್ಷವಾಗಿ ಉಳಿಯುವುದು. ಚೋಳರ ಉದ್ಧಟತನ ದಿನೇ ದಿನೇ ಹೆಚ್ಚುತ್ತಿದೆ. ಅವರು ಹೊಯ್ಸಳರ ತಾಳ್ಮೆಯನ್ನು ಪರೀಕ್ಷಿಸುತ್ತಿದ್ದಾರೆ; ಇವರಿಗೆಲ್ಲ ತಕ್ಕ ಶಾಸ್ತಿ ಮಾಡಿದಾಗಲೇ ನನಗೆ ಸಮಾಧಾನ ಎಂದು ಶಾಂತಲೆಯ ಮನೋ ಸಂಕಲ್ಪ.

ವಿಷ್ಣುವರ್ಧನನು ಚೋಳರ ಸೊಕ್ಕಡಗಿಸಿ ಕನ್ನಡ ನಾಡನ್ನು ಕಟ್ಟುವವರೆಗೆ ವಿವಾಹವಾಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದರೂ ಕೂಡ, ರಾಜಮಾತೆ ಮತ್ತು ಗಂಗರಸರ ಮನಸ್ಸಿಗೆ ನೋವಾಗಬಾರದೆಂದು ವಿವಾಹವಾದನು. ಈಗ ನಮ್ಮ ಸಾಮಂತರಿಗೆ ಚೋಳರು ಮತ್ತು ಚಾಲುಕ್ಯರು ದಿಕ್ಕು ತಪ್ಪಿಸುತ್ತಿರುವರೆಂದು ಅವರ ಸೊಕ್ಕು ಮುರಿಯಲು ಸೈನ್ಯವನ್ನು ಅಣಿಗೊಳಿಸುತ್ತಾರೆ.

ತಲಕಾಡಿನ ಪ್ರಸಿದ್ಧ ವರ್ತಕರಾದ ಕೇತಮಲ್ಲ, ತಿಮ್ಮರಾಯ, ರಾಚಗೌಂಡರು, ಚೋಳರ ಕಾಟ ತಡೆಯಲಾರದೆ ತಲಕಾಡಿನಿಂದ ಕಾಲ್ತೆಗೆದು ಹೊಯ್ಸಳರಲ್ಲಿ ಆಶ್ರಯ ಪಡೆಯುತ್ತಾರೆ. ದಿನದಿಂದ ದಿನಕ್ಕೆ ಚೋಳರ ಕಾಟ ಅಧಿಕವಾಗಿ ವಿಷ್ಣುವಿನಲ್ಲಿ ಆಶ್ರಯ ಪಡೆಯಲು ಸಾವಿರಾರು ವರ್ತಕರು ವಲಸೆ ಬರುತ್ತಾರೆ. ಇದು ಹೊಯ್ಸಳ ಸರ್ವಧರ್ಮೀಯ ಹಾಗೂ ಸಹಿಷ್ಣತೆಯ ಸಂಕೇತವನ್ನು ತಿಳಿಸುತ್ತದೆ.

ದೃಶ್ಯ ಮೂರರಲ್ಲಿ ವಿಷ್ಣುವರ್ಧನ ಮತ್ತು ಶಾಂತಲೆಯರು ಮುಂದಿನ ಯುದ್ಧದ ಬಗ್ಗೆ ಸೈನಿಕರನ್ನು ಅಣಿಗೊಳಿಸಲು ಎಲ್ಲ ತಯಾರಿ ನಡೆಸುತ್ತಾರೆ. ಶಾಂತಲೆಯ ಚಾತುರ್ಯ ಮತ್ತು ಶೌರ್ಯದ ಬಗ್ಗೆ ವಿಷ್ಣುವರ್ಧನನಿಗೆ ಅಪಾರ ನಂಬಿಕೆ ಹಾಗೂ ಗೌರವವಿದೆ. ನಾಡಿನಲ್ಲಾಗುತ್ತಿರುವ ವೈಪರೀತ್ಯ ತಿಳಿಯಲು ಬೇಹು ಪಡೆಯ ಲಕ್ಕಣ್ಣ, ಈರಣ್ಣ, ಮಯೂರಿ, ಚಿನ್ನಪ್ಪ, ಸಿಂಗಯ್ಯ ಮುಂತಾದವರನ್ನು ಕರೆಸುತ್ತಾರೆ. ಬೇಹುಗಾರರು ರಾಜನ ಪ್ರಶ್ನೆಗಳಿಗೆ ಉತ್ತರಿಸುತ್ತ ತಾವುಗಳೆಲ್ಲ ತಲಕಾಡಿಗೆ ಹೋಗಿ ಚೋಳರ ಬಗ್ಗೆ ಸಂಗ್ರಹಿಸಿದ ಮಾಹಿತಿಯನ್ನು ತಿಳಿಸಿದರು. ಚೋಳರಿಗೆ ವೈಷ್ಣವರೆಂದರೆ ಆಗುತ್ತಿರಲಿಲ್ಲ ಹಾಗಾಗಿ ಅವರಿಗೆಲ್ಲ ಕಿರುಕುಳ ಕೊಡುತ್ತಿದ್ದರು. ಇದರಿಂದ ಭಯಭೀತರಾದಂತಹ ರಾಮಾನುಜಾಚಾರ್ಯರು ಸರ್ವಧರ್ಮಗಳ ರಕ್ಷಕರ ನಾಡೆಂದು ಪ್ರಸಿದ್ಧಿ ಪಡೆದ ಹೊಯ್ಸಳರ ನಾಡಿಗೆ ಬರುತ್ತಾರೆ. ಮುಂದೆ ವಿಷ್ಣುವಿನ ಸೈನ್ಯ ಚೋಳರನ್ನು ಸದೆಬಡಿದು ಮುನ್ನುಗ್ಗುತ್ತದೆ.

ಶಾಂತಲೆಯ ಮಾರ್ಗದರ್ಶನದಲ್ಲಿ ತರಬೇತಿ ಪಡೆದ ಸೈನ್ಯದ ಬಗ್ಗೆ ವಿಷ್ಣುವಿಗೆ ಮೆಚ್ಚುಗೆಯಾಗುತ್ತದೆ. ವಿವಿಧ ಕುಶಲ ಕರ್ಮಿಗಳನ್ನೊಳಗೊಂಡ ಸಮರ್ಥ ಸೈನ್ಯ ಯುದ್ಧಕ್ಕೆ ಸಜ್ಜಾಗುತ್ತದೆ. ಸೈನಿಕರೆಲ್ಲ ರಾಜನಿಗೆ ಜಯಕಾರ ಕೂಗುತ್ತ ಮುಂದೆ ಸಾಗುತ್ತಾರೆ.

ವಿಷ್ಣುವರ್ಧನ ಮತ್ತು ಶಾಂತಲೆ ಅರಮನೆಯ ಉಪವನದ ಕೇಳಿ ಗೃಹದಲ್ಲಿ ಏಕಾಂತವಾಗಿ ಕಾಲಕಳೆಯುತ್ತ ತಮ್ಮ ಬಾಲ್ಯದ ಸವಿಬದುಕನ್ನು ನೆನಪಿಸಿಕೊಳ್ಳುತ್ತಾರೆ. ನಂತರ ತನ್ನ ಪತಿಯ ಶೌರ್ಯ ಪ್ರತಾಪಗಳನ್ನು ಮೆಚ್ಚಿಕೊಳ್ಳುತ್ತ ನಾನು ಸಹ ರಣರಂಗಕ್ಕೆ ಆಗಮಿಸುವುದಾಗಿ ಶಾಂತಲೆ ಹೇಳುವಳು. ಇದಕ್ಕೆ ರಾಜ ಸಮ್ಮತಿ ನೀಡಲು ಅನುಮೋದಿಸಿದಾಗ ಅವನ ಮನವೊಲಿಸಲು ಶಾಂತಲೆಯಾಡಿದ ಮಾತುಗಳು.

"ಪ್ರಾಣ ಪ್ರಿಯೆ ಪ್ರಾಣಪ್ರಿಯನ ಜತೆಯಿರ್ಪುದು ಸಹಜ ನಾಥ
ಹೊಯ್ಸಳಾಭ್ಯುದಯಕ್ಕಾಗಿ ಮೀಸಲು ತನ್ನ ಸಮರಕಲೆ
ಬಳಸದಿಹ ಕಲೆ ವ್ಯರ್ಥವೆಂದರಿತವರು ನೀವು

ಪತಿಯೊಡನೆ ಸಹಬಾಳ್ವೆ ಸಮದುಃಖ, ಸಮಸುಖಂ,
ಸತಿಗೆ ಸಹಜಧರ್ಮಂ, ಪ್ರಾಣೇಶ" ಎನ್ನುವಳು.

ಹೀಗೆ ಶಾಂತಲೆಯು ತನ್ನ ಶೌರ್ಯ ಸಾಹಸ ಹೊಯ್ಸಳರ ಅಭ್ಯುದಯಕ್ಕೆ ಹಾಗೂ ಕನ್ನಡ ನಾಡಿನ ರಕ್ಷಣೆಗೆ ಮೀಸಲಾಗಿದೆ. ಹಾಗಾಗಿ ರಣರಂಗಕ್ಕೆ ಬಂದು ಶತ್ರುಗಳನ್ನು ಸಂಹಾರ ಮಾಡುವುದಾಗಿ ವಿಷ್ಣುವಿಗೆ ಮನನ ಮಾಡುತ್ತಾಳೆ. ಇದಕ್ಕೆ ಸಮ್ಮತಿಸಿದ ರಾಜ ಮಹಾಮಾತೆಯವರ ಒಪ್ಪಿಗೆ ಸೂಕ್ತವಾದುದೇ ಸರಿ ಎನ್ನುವನು. ತನ್ನ ಮಗಳಂತಿರುವ ನಿನ್ನನ್ನು ರಣರಂಗಕ್ಕೆ ಕಳುಹಿಸಲು ಮನಸ್ಸು ಒಪ್ಪುತ್ತಿಲ್ಲ ಮಗಳೆ, ಎಂದರೂ ಒಲ್ಲದ ಮನಸ್ಸಿನಿಂದ ಮಹಾಮಾತೆ ಆಶೀರ್ವದಿಸುತ್ತಾರೆ.

ಅಂಕ ೪ರಲ್ಲಿ ಹೊಯ್ಸಳರ ಸೇನೆಯ ೩ ತುಕಡಿಗಳು ವಿಷ್ಣು, ಶಾಂತಲೆ, ಬೊಪ್ಪಣ್ಣ, ಕೇತಮಲ್ಲರ ಮುಂದಾಳತ್ವದಲ್ಲಿ ಸಾಗುತ್ತಿದೆ. ಹಂತ ಹಂತವಾಗಿ ಶತ್ರುಗಳ ಸ್ಥಳಗಳನ್ನು ವಿಷ್ಣು ಸೇನೆ ಆಕ್ರಮಿಸುತ್ತಿದೆ. ಅತಿಕ್ರಮಣಿಗಳಾದ ಚೋಳರು ವಿಷ್ಣುಸೇನೆಗೆ ಆಹಾರ, ವಸತಿ, ನೀರು ಸಿಗದಂತೆ ಎಲ್ಲವನ್ನು ಹಾಳುಗೆಡುವುತ್ತಿದ್ದಾರೆ. ಇದು ನ್ಯಾಯಯುತ ಯುದ್ಧನೀತಿಯಲ್ಲ; ಅಲ್ಲದೆ ಕುಲೋತ್ತುಂಗ ಹಾಗೂ ಅವನ ಸೇನಾಧಿಪತಿ ಆದಿಯಮರು ಮಹಾ ಕ್ರೂರಿಗಳೇ ಸರಿ ಎಂದು ವಿಷ್ಣು ಶಾಂತಲೆಗೆ ತಿಳಿಸುವನು. ನ್ಯಾಯಯುತವಾಗಿ ಹೋರಾಟ ನಡೆಸಿದ ವಿಷ್ಣುವಿನ ಸೈನ್ಯಕ್ಕೆ ಜಯದ ಹಾದಿ ಸಮೀಪಿಸುತ್ತಿತ್ತು. ಇದರಿಂದ ಮನಸ್ಸಿಗೆ ನೆಮ್ಮದಿ ಪಡೆದ ಶಾಂತಲೆ ಅರಮನೆಗೆ ಹಿಂದಿರುಗುತ್ತಾಳೆ.

ಚೋಳರ ಕಪಿಮುಷ್ಟಿಯಿಂದ ತಲಕಾಡನ್ನು ವಶಪಡಿಸಿಕೊಂಡ ಹೊಯ್ಸಳರು ಕನ್ನಡ ನಾಡಿಗೆ ಮುಕ್ತಿಗಳಿಸಿಕೊಟ್ಟರು. ಜಯಕ್ಕೆ ಕಾರಣರಾದ ಹಾಗೂ ತಮ್ಮ ಪ್ರಾಣವನ್ನೇ ಮುಡಿಪಾಗಿಟ್ಟಿದ್ದ ಬೇಹುಗಾರರು ಹಾಗು ಎಲ್ಲಾ ವೀರರನ್ನು ಗೌರವಿಸಲು ವಿಷ್ಣು ಶಾಂತಲೆಯರು ಒಂದು ಸಭೆ ನಡೆಸುತ್ತಾರೆ. ಅದರಲ್ಲೂ ಚೋಳರ ಮಹಾಪಟಂಗನಾದ ದಾಮೋದರನನ್ನು ನಾಶಮಾಡಲು ಮಯೂರಿ ತನ್ನ ಮಾನವನ್ನೇ ಮುಡಿಪಾಗಿಟ್ಟಳು. ಅವಳು ಹೇಳುವಂತೆ ಒಬ್ಬ ವ್ಯಕ್ತಿಯ ಪ್ರಾಣಕ್ಕಿಂತ ದೇಶದ ಮಾನದೊಡ್ಡದು ಇದೇ ಅಕ್ಷರಸಹ ಸತ್ಯ. ಒಟ್ಟಿನಲ್ಲಿ ಮಯೂರಿ ಮೊದಲಾದವರಿಂದ ಉತ್ತಮ ಮಾಹಿತಿ ಕಲೆಹಾಕಿ ಕೊಡುತ್ತಾರೆ. ರಾಜ ಎಲ್ಲರನ್ನೂ ಗೌರವದಿಂದ ನೋಡಿಕೊಳ್ಳುತ್ತಾನೆ. ಅನಂತರ ಗಂಗರಾಜರ ಅಪೇಕ್ಷೆಯಂತೆ ವಿಷ್ಣು ಸಲ್ಲೇಖನವ್ರತ ಮಾಡಲು ಒಪ್ಪುತ್ತಾನೆ.

ಅಂಕ ೫ರಲ್ಲಿ ವಿಷ್ಣುವರ್ಧನ ಚೈತ್ರಯಾತ್ರೆಗೆ ತೆರಳಿ ಎರಡೂವರೆ ವರ್ಷವಾದರೂ ಹಿಂದಿರುಗಿಲ್ಲ, ಅಲ್ಲದೆ ಮಗಳು ಹರಿಯಾಲೆಗೆ ಆರೋಗ್ಯ ಸರಿಯಿಲ್ಲದ ಸಮಯದಲ್ಲೂ ಅವರ ಹತ್ತಿರದಲ್ಲಿ ಇಲ್ಲದಿದ್ದು ರಾಜಮಾತೆಗೆ ಆತಂಕ ಹುಟ್ಟಿಸುತ್ತದೆ.

ಅಷ್ಟರಲ್ಲಿ ಮಾರಸಿಂಗಮಯ್ಯ ಪ್ರಭುಗಳ ಆಗಮನ ಇನ್ನೆರಡು ದಿನಗಳಲ್ಲಾಗುವುದೆಂದು ತಿಳಿಸುತ್ತಾನೆ. ಅಲ್ಲದೆ ಕುಲೋತ್ತುಂಗನ ಕಾಟ ತಡೆಯಲಾರದೆ ರಾಮಾನುಜಾಚಾರ್ಯರು ಕರ್ನಾಟಕಕ್ಕೆ ಬಂದಿರುವುದು ಏಚಲೆ ಶಾಂತಲೆಯರಿಗೆ ಮತ್ತಷ್ಟು ಸಂತೋಷವುಂಟು-ಮಾಡುತ್ತದೆ. ಆಚಾರ್ಯರ ಶಿಷ್ಯ ಪೆರುಮಾರರು ಹರಿಯಾಲೆ ಕಾಯಿಲೆ ತಿಳಿದು ಇದು ವಾಸಿಯಾಗುತ್ತದೆ ತಾವುಗಳು ಒಮ್ಮೆ ಆಚಾರ್ಯರಿಂದ ಆಶೀರ್ವಾದ ಪಡೆಯಿರೆಂದು ತಿಳಿಸುತ್ತಾನೆ.

ಯುದ್ಧ ಮುಗಿಸಿ ಹಿಂತಿರುಗಿದ ವಿಷ್ಣುವಿಗೆ ರಾಜ್ಯದಲ್ಲಿ ಅದ್ದೂರಿ ಸ್ವಾಗತ ದೊರಕುತ್ತದೆ. ನಂತರ ರಾಜ ಅಂತಃಪುರಕ್ಕೆ ತೆರಳಿ ಶಾಂತಲೆಯ ಸರಳ ದಿನಚರಿ ಮತ್ತು ಉಪವಾಸದಿಂದ ಆಕೆಯ ದೇಹ ಕೃಷವಾಗಿರುವುದು ವಿಷ್ಣುವನ್ನು ದಿಗ್ಭ್ರಮೆಗೊಳಿಸುವುದು, ಅದಕ್ಕೆ ಶಾಂತಲೆ,

> "ಬದುಕೆಲ್ಲ ತಪಸ್ಸಾದಾಗಲೇ ವಿಶ್ವಶಾಂತಿ ಪ್ರಿಯ, ತಪಸ್ಸಿಲ್ಲದೆ
> ಬದುಕು ವ್ಯರ್ಥ ಶ್ರಮನಷ್ಟ ಹಾಗೂ ಹಿಂಸಾಕೃತ್ಯಗಳಿಗೆ ವ್ರತ
> ಅನಿವಾರ್ಯ, ವಿಶ್ವಚೇತನಗಳನ್ನೊಲಿಸಿಕೊಳ್ಳುವ ವಿಧಾನವಿದು"[೭]

ಎಂದು ತಪ ಶಕ್ತಿಯ ಮಹಿಮೆಯನ್ನು ತಿಳಿಸುತ್ತಾಳೆ. ಅಲ್ಲದೆ ತಮ್ಮ ಮಗಳನ್ನು ರಾಮಾನುಜರಲ್ಲಿಗೆ ಕರೆದೊಯ್ದು ಆಶೀರ್ವಾದ ಪಡೆಯೋಣವೆಂದು ತೀರ್ಮಾನಿಸುತ್ತಾರೆ.

ವಿಷ್ಣುವರ್ಧನ ಮತ್ತು ಶಾಂತಲೆಯರು ವೈಷ್ಣವ ಧರ್ಮಪ್ರಚಾರ ಹಾಗು ವಿಶಿಷ್ಟಾದ್ವೈತದ ಪ್ರತಿಪಾದಕರಾದ ರಾಮಾನುಜಾಚಾರ್ಯರನ್ನು ನೋಡಿ ಆಶೀರ್ವಾದ ಪಡೆಯಲು ತೊಂಡನೂರಿನ ಅವರ ಆಶ್ರಮಕ್ಕೆ ಬರುತ್ತಾರೆ. ಆಚಾರ್ಯರು ಅವರನ್ನೆಲ್ಲ ಆಶೀರ್ವದಿಸಿ ಹರಿಮಾಲೆಯ ಕಾಯಿಲೆ ಗುಣಮುಖವಾಗಲು ಚೂರ್ಣವನ್ನು ಕೊಡುತ್ತಾರೆ. ಹೊಯ್ಸಳ ನಾಡಿನ ಸರ್ವಧರ್ಮಸಮನ್ವಯ ನೀತಿಯಿಂದ ಆಚಾರ್ಯರು ಸಂತೋಷಗೊಂಡಿದ್ದಾರೆ. ರಾಜರಾಣಿಗೆ ಆಚಾರ್ಯರು ವೈಷ್ಣವ ಧರ್ಮದ ಸಾರವನ್ನು, ಮಾತಾಂತರ ಕಲ್ಪನೆ ಮತ್ತು ಅಸ್ಪೃಶ್ಯತೆಯ ಆಚರಣೆಯನ್ನು ಮನಮುಟ್ಟುವಂತೆ ಸರಳವಾಗಿ ತಿಳಿಸಿಕೊಡುತ್ತಾರೆ. ಇದರ ಪ್ರತಿಯಾಗಿ ವಿಷ್ಣು ಅನೇಕ ವೈಷ್ಣವ ದೇವಾಲಯ ಕಟ್ಟಲು ಸಮ್ಮತಿಸುವನು. ಆಚಾರ್ಯರ ಮನೋಭಾವದಂತೆ ಪೆರುಮಾಳ್ ಮತ್ತು ಅವರ ಮಗಳು ಲಕ್ಷ್ಮಿ ಅರಮನೆಗೆ ಸಹಾಯಕರಾಗಿರಲು ವಿಷ್ಣು ಶಾಂತಲೆಯರು ಒಪ್ಪುವರು.

ದ್ವಾರಾವತಿಯ ತಮ್ಮ ಮನೆಯಲ್ಲಿ ಪೆರುಮಾಳ್ ತನ್ನ ಮಗಳ ಅರಮನೆಯ ಕಾರ್ಯವೈಖರಿ ಬಗ್ಗೆ ಚರ್ಚಿಸುತ್ತಿದ್ದಾನೆ. ಲಕ್ಷ್ಮಿ ಅರಮನೆಯಲ್ಲಿ ಎಲ್ಲರಿಗೂ

ಅಚ್ಚುಮೆಚ್ಚು. ಮಹಾರಾಣಿಗೆ ೨ನೇ ಗಂಡುಮಗು ಜನಿಸಿದೆ ಎಂದು ತಿಳಿದ ಪೆರುಮಾಳನು ಅರಮನೆಯ ಮುಂದಿನ ಸಿಂಹಾಸನದ ಯುವರಾಜ ನನ್ನ ಮಗಳ ಮಗನಾಗಬೇಕೆಂದು ಬಯಸುತ್ತಾನೆ. ತನ್ನ ಮಗಳು ಲಕ್ಷ್ಮಿ ರಾಜರ ಕೈಹಿಡಿಯಬೇಕು ಅದಕ್ಕಾಗಿ ನಾ ಹೇಳಿದಂತೆ ಅರಮನೆಯಲ್ಲಿ ಎಲ್ಲಾ ಆಗುಹೋಗುಗಳನ್ನು ನನಗೆ ತಿಳಿಸಬೇಕೆಂದು ಹೇಳುತ್ತಾನೆ. ಮಾತೃಶ್ರೀ ಏಕಾಂತದಲ್ಲಿ ಇರುವಾಗ ರಾಜರ ಸೇನೆಯ ಭಾಗ್ಯವನ್ನು ದೊರಕಿಸಿಕೊಡುವಂತೆ ಕೇಳಿಕೊ ಎನ್ನುವನು. ನಾಡಿನ ಪ್ರಖ್ಯಾತ ಶಿಲ್ಪಿಗಳಾದ ಜಕಣಾಚಾರಿ, ಡಕಣಾಚಾರಿ, ದಾಸೋಜ, ಮಲ್ಲಿತಮ್ಮ ಮೊದಲಾದವ-ರೊಂದಿಗೆ ಶಾಂತಲೆ ದೇವಾಲಯಗಳ ರಚನೆ ಕುರಿತು ಸಂವಾದದಲ್ಲಿದ್ದಾಳೆ, ವಾಸ್ತವವಾಗಿ ಈಕೆಯೂ ಶಿಲ್ಪಕಲೆಯ ಬಗ್ಗೆ ತಿಳಿದಿದ್ದಳು. ಈಗ ನಿರ್ಮಿಸುತ್ತಿರುವ ದೇವಾಲಯಗಳಲ್ಲಿ ಆಚಾರ್ಯರು ಉತ್ತರ ಪ್ರದೇಶದಿಂದ ತರಲಿರುವ ಚೆನ್ನಕೇಶವ ಮತ್ತು ಸೌಮ್ಯಕೇಶವರ ವಿಗ್ರಹಗಳನ್ನು ಪ್ರತಿಷ್ಠಾಪಿಸುವ ಮನೋಭಾವ ಶಾಂತಲೆಯಲ್ಲಿತ್ತು. ಈ ದೇವಾಲಯಗಳ ಸರ್ವಕಲೆಯ ಸಂಗಮದೊಂದಿಗೆ ನೃತ್ಯಕಲೆ ಸೇರಿದರೆ ಪೂರ್ಣ ಹಾಗಾಗಿ ರಾಣಿಯವರು ನೃತ್ಯಕಲೆ ಪ್ರದರ್ಶಿಸಿದರೆ ಅದರ ಪ್ರತಿರೂಪವನ್ನು ನಾವುಗಳು ದೇವಲಯದಲ್ಲಿ ನಿರ್ಮಿಸುವುದಾಗಿ ಶಿಲ್ಪಿಗಳು ಬಯಸುತ್ತಾರೆ. ಇದಕ್ಕೆ ಶಾಂತಲೆ ಒಪ್ಪಿಕೊಳ್ಳುವಳು.

ರಾಜಮಾತೆಯ ಆರೋಗ್ಯ ದಿನದಿಂದ ದಿನಕ್ಕೆ ಹದಗೆಡುತ್ತಿರುವುದೆಂದು ವೈದ್ಯರು ತಿಳಿಸುತ್ತಾರೆ. ರಾಜಮಾತೆ ಲಕ್ಷ್ಮಿಯ ಸೇವೆಯನ್ನು ನೆನೆದು, ನಿನ್ನ ಬದುಕು ಅವರಿವರ ಸೇವೆಗೆಂದೇ ಮುಡಿಪಾಗಿಡಬೇಡ; ನಿನ್ನ ಬಯಕೆ ಆಸೆಗಳೇನು ಹೇಳು ಮಗು ಎಂದಾಗ ಲಕ್ಷ್ಮಿಯು ರಾಜರ ಸೇವೆಗೆ ಅವಕಾಶ ಕಲ್ಪಿಸಿಕೊಡಬೇಕೆಂದು ಕೇಳುತ್ತಾಳೆ. ರಾಜಮಾತೆ ಶಾಂತಲೆಯೊಂದಿಗೆ ಈ ವಿಷಯ ಪ್ರಸ್ತಾಪಿಸಿದಾಗ ಉದಾರಿ ಶಾಂತಲೆ ಅದಕ್ಕೊಪ್ಪುತ್ತಾಳೆ. ಈ ವಿಷಯವನ್ನು ರಾಜರೊಂದಿಗೆ ಪ್ರಸ್ತಾಪಿಸೋಣ ಲಕ್ಷ್ಮಿ ನಮ್ಮ ಮನೆಗಾಗಿ ತನ್ನ ಬದುಕನ್ನೇ ಮುಡಿಪಾಗಿಟ್ಟಿದ್ದಾಳೆ ಎನ್ನುತ್ತಾಳೆ. ವಿಷಯ ತಿಳಿದ ರಾಜ ತಾಯಿಯ ಮಾತು ಮೀರಿ ಆಕೆಯ ಮನಸ್ಸನ್ನು ನೋಯಿಸಬಾರದೆಂದು ಒಪ್ಪುತ್ತಾನೆ.

ಯಾದವಗಿರಿಯ ಚೆಲುವ ನಾರಾಯಣಸ್ವಾಮಿಯ ಪ್ರತಿಷ್ಠಾಪನೆ ಸಂದರ್ಭದಲ್ಲಿ ದೆಹಲಿಯ ಸುಲ್ತಾನನ ಮನವೊಲಿಸಿಕೊಂಡು ಚೆಲುವ ನಾರಾಯಣ ವಿಗ್ರಹವನ್ನು ಆಚಾರ್ಯರು ತಂದು ಪ್ರತಿಷ್ಟಾಪಿಸಿ ಎಲ್ಲ ಭಕ್ತರಿಗೂ ಆಶೀರ್ವದಿಸುತ್ತಾರೆ. ಲಕ್ಷ್ಮಿ ವಿಷ್ಣುವನ್ನು ವಿವಾಹವಾದ ಸುದ್ದಿ ತಿಳಿದು ಸರ್ವಧರ್ಮಗಳು ಸಮನ್ವಯ-ವಾದಂತಾಯಿತೆಂದು ಖುಷಿ ಪಡುತ್ತಾರೆ.

ವೇಲಾಪುರಿಯಲ್ಲೆಲ್ಲ ಹಬ್ಬದ ವಾತಾವರಣ ತುಂಬಿದೆ. ಆಚಾರ್ಯರು ಚನ್ನಕೇಶವ ಮತ್ತು ಸೌಮ್ಯಕೇಶವಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾರೆ. ಈ ಸಮಯದಲ್ಲಿ ಶಾಂತಲೆ

ತನ್ನ ನೃತ್ಯ ಕಲೆಯಿಂದ ಎಲ್ಲರನ್ನು ಮೈಮರೆಯುವಂತೆ ಮಾಡಿದ್ದಾಳೆ. ಹೊಯ್ಸಳ ನಾಡಿನ ಜನತೆ ಅದೃಷ್ಟವಂತರು ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿಗಳಲ್ಲಿ ವಿಶ್ವಾಸವಿರುವಂತಹ ರಾಜ ರಾಣಿಯರನ್ನೂ ಪಡೆದಿದ್ದೀರಿ ಎನ್ನುತ್ತಾನೆ. ಅದೇ ಸಮಯದಲ್ಲಿ ಶ್ರೀರಂಗದಿಂದ ಆಚಾರ್ಯರಿಗೆ ಕರೆಬರಲು ಹಿಂದಿರುಗುತ್ತಾರೆ. ಅವರ ಹಿಂದಿರುಗುವಿಕೆಯಿಂದ ನಾಡಲ್ಲೆಲ್ಲ ದುಃಖ ಆವರಿಸುತ್ತದೆ.

ವೈಷ್ಣವ ದೇವಾಲಯಗಳ ಪ್ರತಿಷ್ಠಾಪನೆಯಾದ ಮೇಲೆ ನಗರದಲ್ಲೆಲ್ಲ ಜಿನಭಕ್ತರು, ಶಿವಭಕ್ತರು, ರಾಜ್ಯದ ಆದಾಯವನ್ನು ರಾಜರು ವೈಷ್ಣವ ಧರ್ಮಪ್ರಚಾರ ಮತ್ತು ದೇವಾಲಯಗಳ ನಿರ್ಮಾಣಕ್ಕೆ ಬಳಸುತ್ತಿದ್ದಾರೆಂದು ಮಾತನಾಡಿಕೊಳ್ಳುವುದು ತಿಳಿದುಬಂದಿದೆ ಎಂದು ಕೇತಮಲ್ಲ ವಿಷ್ಣುವಿಗೆ ತಿಳಿಸುತ್ತಾನೆ. ಹಾಗಾಗಿ ರಾಜರ ಅಭ್ಯಂತರವಿಲ್ಲದಿದ್ದಲ್ಲಿ ದ್ವಾರಾವತಿಯಲ್ಲಿ ಶಿವದೇವಾಲಯವನ್ನು ನನ್ನ ಸ್ವಂತ ಕರ್ಚಿನಲ್ಲಿ ಕಟ್ಟಿಸುವುದಾಗಿ; ಆ ದೇವಾಲಯಗಳಿಗೆ ಹೊಯ್ಸಳೇಶ್ವರ, ಶಾಂತಲೇಶ್ವರವೆಂದು ಹೆಸರಿಡುವುದಾಗಿ ತಿಳಿಸುತ್ತಾನೆ. ವ್ಯಕ್ತಿಯ ಹೆಸರನ್ನು ದೇವಾಲಯಕ್ಕೆ ಇಡುವುದು ಅಹಂ ಎನ್ನಿಸುವುದಿಲ್ಲವೆ? ಇಲ್ಲ ಪ್ರಭು ತಾವೇ ಕಟ್ಟಿಸಿದ ದೇವಾಲಯಗಳಿಗೆ ವ್ಯಕ್ತಿಯ ನಾಮಕರಣ ಮಾಡಿಕೊಂಡರೆ ಅಹಂ ಆಗುತ್ತಿತ್ತು. ಆದರೆ ನಾಡಿನ ಪ್ರಜೆಗಳು ಇಷ್ಟಪಟ್ಟು ಮಾಡುವ ಕಾರ್ಯ ಇದಾದುರಿಂದ ಅಹಂ ಆಗುವುದಿಲ್ಲವೆಂದು ಕೇತಮಲ್ಲನ ಇಂಗಿತ. ಈ ಕಾರ್ಯಕ್ಕೆ ರಾಜರಾಣಿಯರ ಒಪ್ಪಿಗೆ ಸಿಕ್ಕುತ್ತದೆ. ಅಲ್ಲದೆ ಸೂಕ್ತ ಸಂದರ್ಭದಲ್ಲಿ ರಾಣಿಯವರು ಸಲಹೆ ಸೂಚನೆಗಳನ್ನು ನೀಡಿ ದೇವಾಲಯಗಳ ನಿರ್ಮಾಣಕ್ಕೆ ಸಹಕರಿಸಬೇಕಾಗಿ ಕೇಳಿಕೊಳ್ಳುತ್ತಾನೆ.

ಶಾಂತಲೆ ಶಿವದೇವಾಲಯಗಳನ್ನು ನಿರ್ಮಿಸುತ್ತಿರುವುದು ಪೆರುಮಾಳನ ದಳ್ಳುರಿಗೆ ಕಾರಣವಾಗುತ್ತದೆ. ಹಾಗಾಗಿ ಈ ಕೆಲಸಕ್ಕೆ ಇಲ್ಲದ್ದನ್ನೆಲ್ಲ ಸೇರಿಸಿ ಹೇಳಲು ಆರಂಭಿಸುತ್ತಾನೆ. ಇದು ಹಂತಹಂತವಾಗಿ ನಿನ್ನ ಮತ್ತು ನಿನ್ನ ಮಗನ ಅಂತ್ಯಕ್ಕೆ ದಾರಿ ಹಾಗಾಗಿ ನೀನೀಗ ಎಚ್ಚರ ವಹಿಸಬೇಕೆಂದು ತನ್ನ ಮಗಳು ಲಕ್ಷ್ಮಿಗೆ ತಿಳಿಸುತ್ತಾನೆ. ಅಲ್ಲದೆ ಶಾಂತಲೆಯ ಸಹಚರರ ಬಗ್ಗೆಯೂ ನಿಷ್ಠುರವಾಗಿರೆಂದು ತಿಳಿಸುತ್ತಾನೆ. ಈತನ ಉದ್ದೇಶ ವೈಷ್ಣವ ಧರ್ಮದ ಏಳ್ಗೆ ಹಾಗೂ ತನ್ನ ಮೊಮ್ಮಗನನ್ನು ಸಿಂಹಾಸನಕ್ಕೇರಿಸುವುದೇ ಆಗಿತ್ತು.

ಶಾಂತಲೆಯ ಕೋಣೆ ಪ್ರವೇಶಿಸಿದ ಲಕ್ಷ್ಮಿ ಅಲ್ಲಿನ ಎಲ್ಲ ವ್ಯಕ್ತಿಗಳು ನನ್ನ ವಿರುದ್ಧ ಸಂಚು ನಡೆಸುತ್ತಿರುವುದಾಗಿ ಭಾವಿಸುತ್ತಾಳೆ. ಇಲ್ಲಿ ಎಲ್ಲರೂ ಒಂದೇ ನಾವು ಯಾರಿಗೂ ಎರಡು ಬಗೆಯುವರಲ್ಲ, ಈ ಅಧಿಕಾರಗಳೆಲ್ಲ ಸಂಪ್ರದಾಯವಾಗಿ ಬಂದಿದ್ದು ಯಾವುದನ್ನು ನಾವು ಬಯಸಿ ಪಡೆದದ್ದಲ್ಲ ಎಂದು ಶಾಂತಲೆ ತಿಳಿಸುತ್ತಾಳೆ.

ಇಂತಹ ಸಣ್ಣಪುಟ್ಟ ವಿಷಯದಿಂದ ರಾಜರ ಮನಸ್ಸಿಗೆ ನೋವಾಗದಂತೆ ಶಾಂತಲೆ ತಡೆಹಿಡಿಯಲು ಪ್ರಯತ್ನಿಸಿದರೆ, ಲಕ್ಷ್ಮಿಗೆ ಯಾರ ಮೇಲೂ ಕರುಣೆಯ ಭಾವವಿಲ್ಲ ಆಕೆಗೆ ತನ್ನ ತಂದೆಯ ಕುಪಿತ ಮಾತುಗಳೇ ಮುಖ್ಯ.

ಅರಮನೆಯ ಎಲ್ಲ ಚಲನವಲನ ತಿಳಿದ ಪೆರುಮಾಳನಿಗೆ ಸಂತೋಷ-ವಾಗುವುದು. ಅಲ್ಲದೆ ಪ್ರಭುಗಳು ಹಾನಗಲ್ಲ ಮೇಲಿನ ದಾಳಿಯ ಸಮಯದಲ್ಲಿ ಪಂಡಿತನನ್ನು ಕರೆಸಿ ರಾಜರ ಮಗ ಬಲ್ಲಾಳನನ್ನು ಮುಗಿಸುವ ಏರ್ಪಾಟು ಮಾಡುತ್ತಾನೆ. ಇದು ಮೋಸವಲ್ಲವೆ ಎಂದ ಲಕ್ಷ್ಮಿಗೆ ಮೋಸವು ಒಂದು ರಾಜಕೀಯ ತಂತ್ರ ಎಂದು ಉತ್ತರಿಸಿ ಮುಂದಿನ ಸಂಚು ರೂಪಿಸಲು ತೆರಳುತ್ತಾನೆ.

ಪೆರುಮಾಳನು ಘಟ್ಟದ ಕೆಳಗಿನ ಪಂಡಿತನನ್ನು ಕರೆಸಿ ಪ್ರಭುಗಳ ಮಗ ಬಲ್ಲಾಳನನ್ನು ಕೊಲ್ಲಿಸಿದನು. ಈ ವಿಷಯ ತಿಳಿದ ಊರಿನ ಜನರೆಲ್ಲ ತಮಗೆ ತಿಳಿದಂತೆ ಮಾತನಾಡಿಕೊಳ್ಳಲಾರಂಭಿಸಿದರು. ಈ ಕೊಲೆಯ ಹಿಂದೆ ಲಕ್ಷ್ಮಿ ಮತ್ತು ಆತನ ತಂದೆ ಪೆರುಮಾಳರದೆ ಎಲ್ಲ ಕೈವಾಡವಿದೆ ಎಂದು ತಿಳಿದು ಅವರನ್ನು ಶಿಕ್ಷಿಸಲು ಮುಂದಾದರು. ಆದರೆ ಅಲ್ಲಿನ ಕೆಲವರು ಸೌಮ್ಯ ಸ್ವಭಾವದ ಮಹಾರಾಜರ ಮನಸ್ಸಿಗೆ ನೋವುಂಟುಮಾಡುವುದು ಬೇಡ ಅವರೇ ಇದಕ್ಕೆ ಪರಿಹಾರ ಮಾಡುವರೆಂದು-ಕೊಂಡರು.

ಮಗನ ಸಾವು ತಿಳಿದ ರಾಜ ಯುದ್ಧ ಭೂಮಿಯಿಂದ ಹಿಂದಿರುಗಿದನು. ತನ್ನ ನಡುಗುವ ಕೈಗಳಿಂದ ಶಾಂತಲೆಯನ್ನೆತ್ತಿ ಸಮಾಧಾನಪಡಿಸಲೆತ್ನಿಸುತ್ತಾನೆ. ರಾಜ ಹೆಚ್ಚು ದುಃಖಿತನಾಗಿ ತನ್ನ ಮಗನನ್ನು ಕೊಂದ ಪಾಪಿಗಳನ್ನು ಈಗಲೇ ಮುಗಿಸುವುದಾಗಿ ಹೊರಟನು. ಆಗ ಶಾಂತಲೆ ಅವನನ್ನು ತಡೆದು, ಇದೆಲ್ಲ ವಿಧಿಯ ವಿಪರ್ಯಾಸ ಅವನಾಡಿಸಿದಂತೆ ಎಲ್ಲ ನಡೆಯುತ್ತಿದೆ ಎನ್ನುವಳು. ಸದಾ ನ್ಯಾಯಯುತವಾಗಿ ಚಿಂತಿಸಿ ಧರ್ಮದಿಂದ ನಡೆದ ದಂಪತಿಗಳಿಗಿಂದು ದುಃಖದಿಂದ ಬಳಲುವ ಪರಿಸ್ಥಿತಿ ಎದುರಾಗಿದೆ. ಇವರನ್ನು ಸಮಾಧಾನಿಸಲು ಊರಿಗೆ ಊರೇ ಧಾವಿಸಿದೆ.

ತನ್ನ ಮನದ ಇಂಗಿತವನ್ನೆಲ್ಲ ವಿಷ್ಣುವಿಗೆ ಅರುಹಿದ ಶಾಂತಲೆ, ತಂದೆಯೊಂದಿಗೆ ಶಿವಗಂಗೆಗೆ ಹೋಗಲು ಮುಂದಾಗುವಳು. ಆದರೆ ಆಕೆಯ ತಾಯಿ ಜೈನಳಾದುದರಿಂದ ಶ್ರವಣಬೆಳಗೊಳದ ಕಡೆಗೆ ಹೋಗುತ್ತಾಳೆ.

ತನ್ನ ಸಹಚರರೊಂದಿಗೆ ಶಾಂತಲೆ ಶಿವಗಂಗೆಯಲ್ಲಿ ದೇವರ ದರ್ಶನ ಮಾಡಿಕೊಂಡು ಬಂದು ತನ್ನ ಬದುಕಿನ ಉದ್ದಕ್ಕೂ ನಡೆದ ಎಲ್ಲ ಘಟನೆಗಳನ್ನು ನೆನೆದು ಮತ್ತಷ್ಟು ದುಃಖಪಡುತ್ತಾಳೆ. ತನ್ನ ಕಂದನನ್ನು ಕಳೆದುಕೊಂಡ ಆಕೆಯ ಮನದ ಪ್ರಲಾಪ ಇನ್ನೂ ಕಡಿಮೆಯಾಗಿಲ್ಲ. ನಾನು ಬದುಕಿದ್ದು ಪ್ರಯೋಜನವಿಲ್ಲ ಬೇಗ ಆ

ಗಂಗಾಧರೇಶ್ವರನ ಒಡಲು ಸೇರಿದರೆ ಸಾಕು ಎಂದುಕೊಳ್ಳುತ್ತಾಳೆ. ಆಗ ಮಯೂರಿ ಮಾರಸಿಂಗರೆ ಮೊದಲಾದವರು ರಾಣಿಯನ್ನು ಸಮಾಧಾನ ಪಡಿಸುತ್ತಾರೆ.

ಅಂದು ಸಂಜೆ ಶಾಂತಲೆಯ ನೃತ್ಯ ಪ್ರದರ್ಶನವೇರ್ಪಟ್ಟಿದೆ. ಆಕೆ ಮೊದಲೇ ಬಳಲಿ ಬೆಂಡಾಗಿದ್ದ ದೇಹವನ್ನು ನೃತ್ಯಕ್ಕೆ ಅಣಿಗೊಳಿಸಿಕೊಳ್ಳುತ್ತಾಳೆ. ಕಲಾಪ್ರೇಕ್ಷಕರೆದುರು ಭಾವಾವೇಷದಿಂದ ನೃತ್ಯ ಮಾಡುತ್ತ ಕೊನೆಗೆ ಅಲ್ಲೇ ಕುಸಿದುಬೀಳುತ್ತಾಳೆ. ಅಲ್ಲದೆ ನೃತ್ಯದಲ್ಲಿಯೇ ಲೀನವಾದ ಆಕೆ ಕೊನೆಯುಸಿರೆಳೆಯುತ್ತಾಳೆ. ಎಲ್ಲ ಕಲಾ ಪ್ರೇಕ್ಷಕರು ದುಃಖಿತರಾಗಿ ವಿಷ್ಣುವಿನ ಸಂಕಟವನ್ನು ನೆನೆಯುತ್ತಾರೆ.

ಯುದ್ಧದಲ್ಲಿ ವಿಜಯಿಯಾಗಿ ಹಿಂತಿರುಗಿದ ವಿಷ್ಣುವಿಗೆ ತನ್ನ ರಾಣಿಯ ಅಗಲಿಕೆಯ ವಿಷಯ ತಿಳಿದು ಮನಸ್ಸು ಅಲ್ಲೋಲ ಕಲ್ಲೋಲವಾಗುತ್ತದೆ. ತನ್ನ ಬಾಳ ಸಂಗಾತಿಯ ಅಗಲಿಕೆಯನ್ನು ಸಹಿಸಲಸಾಧ್ಯವಾಗುತ್ತದೆ. ಈ ಸಮಯದಲ್ಲಿ ಸಮಾಧಾನಿಸಲು ಬಂದ ಪ್ರಧಾನಿ ಜೊತೆ ತನ್ನ ಎಲ್ಲ ಸಂಕಟವನ್ನು ಬಿಚ್ಚಿಡುತ್ತಾನೆ. ಇಂಥ ಸಮಯದಲ್ಲಿ ನಾಡಿನ ಜನತೆಯನ್ನು ಸಮಾಧಾನಗೊಳಿಸಿ ಮಹಾರಾಣಿಯವರ ಕೊನೆಯ ಆಸೆಯನ್ನು ನೆರವೇರಿಸುವುದು ತಮ್ಮ ಕರ್ತವ್ಯ ಪ್ರಭು ಎಂದು ಪ್ರಧಾನಿಗಳು ರಾಜರನ್ನು ಸಮಾಧಾನಿಸುತ್ತಾರೆ.

ಶಾಂತಲೆಯ ಬಯಕೆಯಂತೆ ವಿಷ್ಣುವು ಅಕೆಯ ಶವವನ್ನು ಶಾಂತಲೇಶ್ವರ ದೇವಾಲಯದಲ್ಲಿ ಸಮಾಧಿಮಾಡಿ, ಲಕ್ಕಣ್ಣ, ಈರಣ್ಣರಿಗೆ ಗುಡಿ ಕಟ್ಟಿಸುತ್ತಾನೆ. ಒಟ್ಟಿನಲ್ಲಿ ಶಾಂತಲೆಯನ್ನು ಕಳೆದುಕೊಂಡ ಹೊಯ್ಸಳ ನಾಡೇ ಕತ್ತಲೆಯಲ್ಲಿ ಮುಳುಗಿದೆ.

ಲೇಖಕರು ನಾಟಕದ ಆರಂಭದಂತೆ ಕೊನೆಯಲ್ಲೂ ಭಾರತಮಾತೆ ಮತ್ತು ಭುವನೇಶ್ವರಿಯರ ಸಂವಾದದ ಸಂದರ್ಭ ತಂದಿದ್ದಾರೆ. ತಾಯಿಯರಿಬ್ಬರು ಸತ್ಯವಂತೆ ಸಚ್ಚಾರಿತ್ರವತಿ, ಉದಾರಿ, ನಾಟ್ಯಸರಸ್ವತಿ ಶಾಂತಲೆಯನ್ನು ಮನಸಾರೆ ಬಣ್ಣಿಸುತ್ತಾರೆ. ಈ ಚಿತ್ರ ಲೇಖಕರ ಕಲ್ಪನೆಯ ಸಾರಕ್ಕೆ ಹಿಡಿದ ಕನ್ನಡಿಯಂತಿದೆ.

ಹೊಯ್ಸಳೇಶ್ವರಿ ಶಾಂತಲೆ ಕನ್ನಡದ ಮಹತ್ವದ ಐತಿಹಾಸಿಕ ನಾಟಕಗಳಲ್ಲಿ ಒಂದಾಗಿದೆ. ದೇಜಗೌ ಅವರು ನಾಟಕದ ತಾಂತ್ರಿಕಾಂಶಗಳನ್ನು ಯಶಸ್ವಿಯಾಗಿ ಅಳವಡಿಸಿದ್ದಾರೆ. ಕಾಲೈಕ್ಯ (unity of time) ಕ್ರಿಯೈಕ್ಯ (unity of action) ಮತ್ತು ಸ್ಥಳೈಕ್ಯ (unity of place) ಗಳನ್ನು ಯಶಸ್ವಿಯಾಗಿ ಸಾಧಿಸಿದ್ದಾರೆ. ನಾಟಕದ ಪಾತ್ರಗಳು ಜೀವಂತಿಕೆಯಿಂದ ಕೂಡಿದ್ದು ಚೇತೋಹಾರಿಗಳಾಗಿವೆ. ನಾಟಕದಲ್ಲಿ ಪ್ರಮುಖವಾದ ಸಂಭಾಷಣೆ ಕಲಾಪೂರ್ಣವಾಗಿದ್ದು ನಾಟಕದ ಸಾಹಿತ್ಯಕ ಶೋಭೆಗೆ ಕಾರಣವಾಗಿದೆ. ನೃತ್ಯ ಮತ್ತು ಸಂಗೀತಾಂಶಗಳು ನಾಟಕದ ಮಿಶ್ರ ಕತೆಗೆ

(comtinative art) ಪೂರಕವಾಗಿವೆ. ಈ ನಾಟಕ ಈಗಾಗಲೇ ರಂಗಭೂಮಿಯ ಮೇಲೆ ಪೂರ್ಣ ಯಶಸ್ಸನ್ನು ಪಡೆದಿರುವುದು ಗಮನಾರ್ಹ ಸಂಗತಿಯಾಗಿದೆ.

## ಅಡಿಟಿಪ್ಪಣಿಗಳು

೧. ದೇಜಗೌ – ಹರಳಯ್ಯ ವಿಜಯ, ಪು. ೭

೨. ಅದೇ, ಪು. ೩೬

೩. ಅದೇ, ಪು. ೬೯

೪. ದೇಜಗೌ, ಹೊಯ್ಸಳೇಶ್ವರಿ ಶಾಂತಲಾ, ಪು. ೭

೫. ಅದೇ, ಪು. ೧೭

೬. ಅದೇ, ಪು. ೪೩

೭. ಅದೇ, ಪು. ೫೮.

# ಅಧ್ಯಾಯ – ಐದು

# ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ ನಾಟಕಗಳ ತೌಲನಿಕ ನೋಟ

**ತೌಲನಿಕ ನೋಟ:**

ಮೇಲಿನ ಎರಡು ನಾಟಕಗಳು ಐತಿಹಾಸಿಕ ವಿಷಯ ವಸ್ತುವನ್ನು ಒಳಗೊಂಡಿವೆ. ಬಸವಣ್ಣ, ಬಿಜ್ಜಳ, ವಿಷ್ಣುವರ್ಧನ ಶಾಂತಲೆಯರು ಐತಿಹಾಸಿಕ ವ್ಯಕ್ತಿಗಳಾಗಿದ್ದು ಎರಡು ನಾಟಕದಲ್ಲಿ ಸೇರಿಸಿಕೊಂಡಿದ್ದಾರೆ. ೧೨ನೆಯ ಶತಮಾನದ ಶರಣರ ಚಳುವಳಿಯಿಂದಾಗಿ ನಡೆದ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಹರಳಯ್ಯ ಮದುವರಸರ ಪ್ರಕರಣ ಮುಖ್ಯವಾಗಿದ್ದು, ದೇಜಗೌರವರು ಇದರಿಂದ ಸ್ಫೂರ್ತಿಹೊಂದಿ 'ಹರಳಯ್ಯವಿಜಯ' ನಾಟಕ ರಚಿಸಿದ್ದಾರೆ. ಅದೇ ರೀತಿ ೧೨ನೇ ಶತಮಾನ ಕೊನೆಯ ಭಾಗದಲ್ಲಿ ಕನ್ನಡ ನಾಡನ್ನಾಳಿದ ಹೊಯ್ಸಳ ರಾಜಮನೆತನದ ವಿಷ್ಣುವರ್ಧನ ಹಾಗೂ ಆತನ ಸತಿ ಪ್ರಸಿದ್ಧ ನಾಟ್ಯಸರಸ್ವತಿ ಶಾಂತಲೆಯರಿಂದ ಪ್ರೇರಣೆಗೊಂಡು 'ಹೊಯ್ಸಳೇಶ್ವರಿ ಶಾಂತಲಾ' ನಾಟಕವನ್ನು ರಚಿಸಿದ್ದಾರೆ.

ಈ ನಾಟಕಗಳು ೧೨ನೇ ಶತಮನದ ಆದಿ ಹಾಗೂ ಅಂತ್ಯ ಭಾಗಕ್ಕೆ ಸೇರಿದ, ಇತಿಹಾಸ ಪ್ರಸಿದ್ಧ ವಸ್ತುಗಳನ್ನು ಒಳಗೊಂಡವುಗಳಾಗಿವೆ. ಸಮಕಾಲೀನ ಐತಿಹಾಸಿಕ ನಾಟಕಗಳೆರಡನ್ನು ಲೇಖಕರು ಕಲಾತ್ಮಕತೆಯಿಂದ ಮೂಲಕ್ಕೆ ಲೋಪವಾಗದ ರೀತಯಲ್ಲಿ ರಚನೆ ಮಾಡಿದ್ದಾರೆ. 'ಹರಳಯ್ಯ ವಿಜಯ ಮತ್ತು ಹೊಯ್ಸಳೇಶ್ವರಿ ಶಾಂತಲಾ' ನಾಟಕಗಳೆರಡು ಸಮಕಾಲೀನ ಸಮಸ್ಯೆಗಳನ್ನು ಇಟ್ಟುಕೊಂಡು ರಚನೆಗೊಂಡಿರುವ ನಾಟಕವಾಗಿವೆ. ಎರಡು ನಾಟಕಗಳು ಅನೇಕ ಸಂದರ್ಭಗಳಲ್ಲಿ ಸಾಮ್ಯತೆಯ ಅಂಶಗಳನ್ನು ಒಳಗೊಂಡಿವೆ.

ಐತಿಹಾಸಿಕ ನಾಟಕವು ಅನೇಕ ವಿಷಯದಿಂದ ಮಹತ್ವವುಳ್ಳವಾಗಿರುತ್ತದೆ. ವೈಭವಯುತ ಆಡಳಿತ ಹಾಗೂ ಉತ್ತಮ ಜೀವನ ನಡೆಸಿ, ಹಿಂದೆ ಜೀವಂತವಾಗಿದ್ದು, ಗತಸಿಹೋದವರಿಗೆ ಮತ್ತೆ ಜೀವ ತುಂಬುವ ಕೆಲಸ ಈ ನಾಟಕದಲ್ಲಿ ನಡೆದಿರುತ್ತದೆ. ಆದರೆ ಲೇಖಕನು ತನ್ನ ಅಭಿರುಚಿಗೆ ತಕ್ಕಂತೆ ಕಥೆಯನ್ನು ತಿರುಚುವ ಹಾಗಿಲ್ಲ. ಅವರ ಜೀವನ ವ್ಯಾಪಾರಗಳೆಲ್ಲ ಮೊದಲೇ ನಿರ್ಣಯವಾಗಿರುತ್ತದೆ. ಅವರ ಬದುಕನ್ನು ನೇರವಾಗಿ ಕಂಡವರಾರೂ ಇಲ್ಲ. ಆದರೆ ಎಲ್ಲೋ ಕೇಳಿದ ಪುಸ್ತಕದಲ್ಲಿ ಓದಿದ ವಿಷಯವನ್ನು ಕವಿಯ ಕಲ್ಪನಾಶಕ್ತಿಯ ಆಧಾರದ ಮೇಲೆ ನಾಟಕ ರಚನೆ ಮಾಡಬೇಕಾಗಿದೆ. ಭೀಮನು ದುರ್ಯೋಧನ ಮತ್ತು ದುಶ್ಯಾಸನನನ್ನು ಕೊಂದ ಎಂದರೆ ಅದಕ್ಕೆ ಕಾರಣ ಕವಿ ಪ್ರತಿಭೆಗೆ ತಕ್ಕಂತೆ ನೀಡಲಾಗಿರುತ್ತದೆ. ಇದು ಪುರಾಣಕ್ಕೆ

ಸಂಬಂಧಿಸಿದ್ದು. ನಾಟಕಕಾರನ ಕಲಾಕೌಶಲ್ಯಕ್ಕೆ ತಕ್ಕಂತೆ ರಚನೆಗೊಂಡಿರುತ್ತದೆ. ಆದರೆ ಐತಿಹಾಸಿಕ ಸಂಗತಿಗಳನ್ನು ಸುಲಭವಾಗಿ ಬದಲಾವಣೆ ಮಾಡಲು ಸಾಧ್ಯವಿರುವುದಿಲ್ಲ.

ನಾಟಕಗಳಲ್ಲಿ ಪಾತ್ರಗಳ ಜೋಡಣೆಗೆ ಲೇಖಕರು ಮಹತ್ವ ನೀಡಿದ್ದಾರೆ. ಇಲ್ಲಿನ ಪಾತ್ರಗಳಿಗೆಲ್ಲ ಅವುಗಳದೇ ಆದ ಮಹತ್ವವಿದೆ. ಕವಿ ಪ್ರತಿಭೆಯಂತೆ ನೇರವಾದ ಸಂವಾದದೊಂದಿಗೆ ಪಾತ್ರಗಳು ಚಲನಶೀಲತೆಯಿಂದ ಸಾಗಿವೆ. ಕೆಲವು ಪಾತ್ರಗಳು ಕವಿಸೃಷ್ಟಿಯಾಗಿದೆ. ಹೊಯ್ಸಳೇಶ್ವರಿ ಶಾಂತಲಾ ನಾಟಕದ ಮಯೂರಿ ಪಾತ್ರ ಕವಿಯ ಸೃಷ್ಟಿಯೇ ಹೊರತು ಮೂಲದಲ್ಲಿ ಆ ಪಾತ್ರದ ಪ್ರಸ್ತಾಪವಿಲ್ಲ. ಇಲ್ಲಿ ಮಯೂರಿ ಮತ್ತು ಶಾಂತಲೆಯ ಪಾತ್ರಗಳು ಸ್ತ್ರೀ ಸಂವೇದನೆಯನ್ನು ಪ್ರತಿಬಿಂಬಿಸುವ ಪಾತ್ರಗಳಾಗಿವೆ.

ಹೊಯ್ಸಳ ಪಡೆಗೆ ಬೇಹುಗಾರ್ತಿಯಾಗಿ ನೇಮಕಗೊಂಡಿದ್ದ ಮಯೂರಿ, ವಹಿಸಿದ ಕೆಲಸವನ್ನು ಜವಾಬ್ದಾರಿಯುತವಾಗಿ ನಿರ್ವಹಿಸುತ್ತಿದ್ದಳು.

ಇಲ್ಲಿ ಮಯೂರಿಯ ಪಾತ್ರ ಮುಖ್ಯವೆನಿಸಲು ಕಾರಣ ಚೋಳರ ದಾಮೋದರನನ್ನು ಸದೆಬಡಿಯಲು ಈಕೆ ತೆಗೆದುಕೊಂಡ ಶ್ರಮ. ದಾಮೋದರ ಮಹಾಕ್ರೂರಿ ಇಂತಹವನ ಚಲನವಲನ ಪರೀಕ್ಷಿಸಿ ಹೊಯ್ಸಳರಿಗೆ ಸೂಕ್ತ ಮಾಹಿತಿಯನ್ನು ನೀಡಲು ತನ್ನ ಮಾನವನ್ನೇ ಮುಡಿಪಾಗಿಟ್ಟಳು. ಇವಳಿಗೆ ತನ್ನ ಮಾನಕ್ಕಿಂತ ದೇಶದ ಮಾನ ಮುಖ್ಯವೆನಿಸಿದೆ, ಲೇಖಕರ ಈ ಕಲ್ಪನೆ ಸಮಂಜಸವೆನಿಸಿದೆ. ಮಯೂರಿ ತನ್ನಂತಹ ನಾಯಿಮುಟ್ಟಿದ ಮಡಕೆಯನ್ನು ಒಳಗೆ ತೆಗೆದುಕೊಳ್ಳಲಾರರು ಎಂದಾಗ ಈಕೆಯ ಗಂಡ ಚಿನ್ನಪ್ಪ ಯಾವುದೇ ಷರತ್ತಿಲ್ಲದೆ ತನ್ನ ಸತಿಯೆಂದು ಸ್ವೀಕರಿಸುವನು. ಹೀಗೆ ಒಂದಕ್ಕೊಂದು ಪೂರಕ ಪಾತ್ರಗಳ ಜೋಡಣೆ ಈ ನಾಟಕದಲ್ಲಿದೆ. ಇದೇ ರೀತಿ ಈರಣ್ಣ, ಲಕ್ಕಣ್ಣನ ಪಾತ್ರಗಳು ಇವೆ.

'ಹರಳಯ್ಯನ ವಿಜಯ'ದಲ್ಲಿ ಜಾತ್ಯಾತೀತ ಧೋರಣೆ ಮಡುಗಟ್ಟಿ ನಿಂತಿದೆ. ಸಂಭಾಷಣೆಯಲ್ಲಿ ಆ ಕಾಲದ ಶರಣರ ಸೂಳ್ನುಡಿಗಳನ್ನು ಬಳಸಿರುವುದು ಮಹತ್ವದ ವಿಚಾರ. ಈ ನಾಟಕ ಕ್ರಾಂತಿಕಾರಿಯೂ ಹೌದು ದಾರ್ಶನಿಕ ನಾಟಕವೂ ಹೌದು. ಪ್ರಭುತ್ವದ ಶಿಕ್ಷೆಯನ್ನು ಧಿಕ್ಕರಿಸಿ ಶರಣರ ಛಲವನ್ನು ಎತ್ತಿಹಿಡಿಯುವ ಮದುವರಸ ಮತ್ತು ಹರಳಯ್ಯನವರ ಪಾತ್ರಗಳನ್ನು ಅತ್ಯಂತ ಸಶಕ್ತವಾಗಿ ಜೀವಂತವಾಗಿ ಕಡೆದಿದ್ದಾರೆ. ಉತ್ತಮ ಪಾತ್ರರಚನೆ ಮತ್ತು ಸಂಭಾಷಣಾ ಕೌಶಲಗಳಿಂದ ಮನಂಬುಗುವಂತೆ ಚಿತ್ರಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಒಂದು ಸಂಪೂರ್ಣ ಕ್ರಾಂತಿ ನಾಟಕ ರೂಪವನ್ನು ಪಡೆದಿದ್ದು ಇದೇ ಮೊದಲು.

ಸಹಾಯಕ ಪಾತ್ರಗಳನ್ನು ಲೇಖಕರು ಸಂದರ್ಭಸೂಚಿಯಂತೆ ಬಳಸಿದ್ದಾರೆ. ಅಲ್ಲದೆ ನಾಟಕದ ಮುಂದುವರಿಕೆಗೂ ಪೂರಕವಾಗಿವೆ. ಪೂಜಾರಿಗಳು ಮತ್ತು ಇಲ್ಲಿನ

ಉಪಪಾತ್ರದ ಸಂಭಾಷಣೆ ಆಕರ್ಷಕವಾಗಿ ನಿರೂಪಿಸಲಾಗಿದೆ ನಾಟಕದ ಒಂದು ದೃಶ್ಯಭಾಗ ಹೀಗಿದೆ.

"೩ನೇಯವ : ಯಾರೋ ಘಟ್ಟದ ಕೆಳಗಿನ ಪಂಡಿತ ಅರಮನೆಯೊಳಗೆ ನುಸುಳಿ, ಈ ದುಷ್ಕೃತ್ಯವನ್ನೆಸಗಿ ಪರಾರಿಯಾಗಿದ್ದಾನಂತೆ ಎಷ್ಟು ಹುಡುಕಿದರೂ ಅವನು ಸಿಗಲಿಲ್ಲವಂತೆ

೪ನೇಯವ : ಲಕ್ಷ್ಮಿಯೇ ಅವನನ್ನು ಗೋಪ್ಯವಾಗಿರಿಸಿಕೊಂಡು ಈ ಹೇಯ ಕಾರ್ಯವನ್ನು ಮಾಡಿಸಿ, ಏನೂ ಕಾಣದವಳಂತೆ ನಟಿಸುತ್ತಿದ್ದಾಳಂತೆ"[೧]

ಶಾಂತಲೆಯ ಮಗನಾದ ಚಿಕ್ಕಬಲ್ಲಾಳನ ಮರಣದ ಸಂಚಿನ ಬಗ್ಗೆ ಊರಿನ ಪ್ರಮುಖರು ಮಾತನಾಡಿಕೊಳ್ಳುತ್ತಿದ್ದ ಸಂದರ್ಭದಲ್ಲಿನ ಉಪಪಾತ್ರಗಳಿವು. ಬಹಳ ಸ್ವಾರಸ್ಯಕರ ಸಂಭಾಷಣೆಯಿಂದ ಕೂಡಿದೆ.

ಮುಖ್ಯವಾಗಿ ನಾಟಕದ ಆರಂಭದಲ್ಲಿ ಸೂತ್ರದಾರನ ಪಾತ್ರವಿರುತ್ತದೆ. ಈತ ನಾಟಕದ ಮುಂದಿನ ಕಥೆಯನ್ನು ಸಂಗ್ರಹ ರೂಪದಲ್ಲಿ ತಿಳಿಸಿಕೊಡುವನು. ಇದೇ ರೀತಿ ಲೇಖಕರು ಶರಣಮೇಳವನ್ನು ಬಳಸಿಕೊಂಡಿದ್ದಾರೆ. ದೇಜಗೌರವರು ತಮ್ಮ ನಾಟಕದಲ್ಲಿ ಶರಣಮೇಳದ ಜೊತೆಗೆ ಹೊಯ್ಸಳೇಶ್ವರಿ ಶಾಂತಲಾದಲ್ಲಿ ಭರತಮಾತೆ ಮತ್ತು ಭುವನೇಶ್ವರಿ ಪಾತ್ರಗಳನ್ನು ಅವರ ಸಂವಾದವನ್ನು ರಸವತ್ತಾಗಿ ಚಿತ್ರಿಸಿದ್ದಾರೆ. ಇದು ನಾಟಕಕ್ಕೆ ಒಡವೆರೀತಿ ಸೌಂದರ್ಯವನ್ನು ತಂದುಕೊಟ್ಟಿದೆ. ಅಲ್ಲದೆ ಲೇಖಕರ ಸ್ವಂತ ಕಲ್ಪನೆ ಇದಾಗಿದೆ. ಕನ್ನಡ ನಾಡಿನ ಚೆಲುವನ್ನು ನಾಡಿನ ಹಿರಿಮೆಯನ್ನು ತಿಳಿಸುವ ಪ್ರಯತ್ನ ಇದಾಗಿದೆ.

ಶರಣಮೇಳ ಕಲ್ಪನೆ ನಮಗೆ ಕಾಣಸಿಗುವಂತದ್ದು ಗ್ರೀಕ್ ರುದ್ರನಾಟಕಗಳಲ್ಲಿ ಇಲ್ಲಿಯೂ ಸಹ ಮೇಳದವರು ನಾಟಕಕ್ಕೆ ಶೃಂಗಾರ ಕಳಸದಂತೆ ಕಂಡುಬರುತ್ತಾರೆ. ಹಳಗನ್ನಡ ಮಿಶ್ರಿತ ಕನ್ನಡದ ಬಳಕೆಯಿಂದ ಪದ್ಯರೂಪದ ಸಾಲುಗಳನ್ನು ಲೇಖಕರು ಶರಣರ ಬಾಯಿಂದ ಆಡಿಸಿದ್ದಾರೆ.

ಕ್ರಾಂತಿ ಕಹಳೆಯ ಹರಳಯ್ಯನ ಪಾತ್ರ ಲೇಖಕರಿಗೆ ಅಚ್ಚುಮೆಚ್ಚು, ಹಾಗಾಗಿಯೆ ಅಲ್ಲಿನ ಲೋಕಪಾತ್ರ ಇಲ್ಲಿ ಕಲಾಪಾತ್ರವಾಗಿ ಲೇಖಕರಿಂದ ವಿಶೇಷ ಮೆರುಗನ್ನು ಪಡೆದುಕೊಂಡಿದೆ. ೧೨ನೇ ಶತಮಾನದಲ್ಲಿನ ವರ್ಣಸಂಕರದ ತಾಪದಿಂದ ನೊಂದುಬೆಂದವರು ದಲಿತವರ್ಗದವರು. ಆ ನೋವನ್ನು ಪ್ರತಿನಿಧಿಸುವ ಪ್ರತಿನಿಧಿಯಾಗಿ ಹರಳಯ್ಯನ ಪಾತ್ರವನ್ನು ಲೇಖಕರು ಬಳಸಿಕೊಂಡಿದ್ದಾರೆ. ಮೌಢ್ಯ ಜಾತಿವ್ಯವಸ್ಥೆಯಿಂದ ಹೊರಬಂದ ಹರಳಯ್ಯ ಶರಣರ ಸಂಘ ಸೇರಿದನು.

ಶರಣರು ತತ್ವಪರ ಚಿಂತಕರು, ವಿಚಾರಶೀಲ ಮೌಲ್ಯಗಳಿಂದ ಕೂಡಿದ ಈ ಶರಣರ ಸಂಘವು ಧರ್ಮಶಾಸ್ತ್ರ, ಆಳು-ಅರಸ, ಮೇಲು-ಕೀಳು ಎಂಬ ಭೇದಭಾವಗಳಿಂದ ದೂರ ಸರಿದು ಆ ತರತಮ ಭೇದಭಾವಗಳನ್ನು ಬಗ್ಗುಬಡಿಯುವ ಜನರ ಧ್ವನಿ. ಅರ್ಥಭರಿತ ಚಿಂತನೆಯಿಂದ ರಾಜಾಶ್ರಯ, ಜಾತಿ, ಅಂತಸ್ತುಗಳ ಗದ್ದುಗೆಯನ್ನು ಕಿತ್ತೊಗೆದು ಸಮಾಜಪರ ಚಿಂತನೆ, ಧರ್ಮ ನಿರಪೇಕ್ಷವಾದ, ಸಾರವತ್ತಾದ ವ್ಯವಸ್ಥೆಯನ್ನು ಅರಸಿ; ಜೀವಂತ ಮೌಲ್ಯಗಳನ್ನು ಉಳಿಸುವ ಪ್ರಯತ್ನ ಶರಣರು ಮಾಡಿರುವರು. ಒಟ್ಟಾರೆ ಇವರ ನಿಲುವು ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುವುದೇ ಆಗಿತ್ತು.

ದಲಿತ ಜೀವನದ ಒಟ್ಟು ಜೀವನವನ್ನು ಅವಲೋಕಿಸುವ ಪ್ರಯತ್ನ ಹರಳಯ್ಯ ವಿಜಯದಲ್ಲಿ ನಡೆದಿದೆ. ಇಲ್ಲಿ ಬರುವ ವರ್ಣನೆ ಚೈತನ್ಯಪೂರ್ವಕವಾಗಿದೆ. ಇಲ್ಲಿ ಬರುವ ದಲಿತ ಪಾತ್ರಗಳು ತಮ್ಮ ಬದುಕು ಹಸನಾಗಿಸುವ ವ್ಯಕ್ತಿಗಾಗಿ ಹಾತೊರೆಯುತ್ತಿವೆ. ಅವನಿಗಾಗಿ ತಮ್ಮ ಪ್ರಾಣವನ್ನೇ ಮುಡಿಪಾಗಿಡುವ ಹಂಬಲ ಅವರಲ್ಲಿದೆ. ಬಡತನ ಮತ್ತು ಅದರಿಂದ ಹುಟ್ಟುವ ನೋವು ಹಾಗೂ ಅಂತ್ಯಜರೆಂಬ ಅವಮಾನ ಅವರನ್ನು ಕಾಡುತ್ತಿದೆ. ಎಲ್ಲರಂತೆ ಮನುಷ್ಯರಾದ ನಮ್ಮನ್ನು ವ್ಯವಸ್ಥಿತ ಬದುಕು ನಡೆಸಲು ಬಿಡದ ಜಾತ್ಯಾಂಧರಿಗೆ ಅವರ ಗೋಳಿನ ಶಾಪ ತಟ್ಟದೆ ಇರುವುದಿಲ್ಲ. ನೋವು ತಡೆಯಲಾರದ ದಲಿತ ಮಕ್ಕಳ ಕೂಗು ಆ ಅವಿವೇಕಿ ಜಾತ್ಯಾಂಧರಿಗೆ ಕೇಳಿಸುವುದಿಲ್ಲ. ಅಂತಹ ಮನ ಕಂಪಿಸುವ ದೃಶ್ಯವನ್ನು ದೇಜಗೌ ತಮ್ಮ ನಾಟಕದಲ್ಲಿ ಹೀಗೆ ತಂದಿದ್ದಾರೆ.

"ಹುಡುಗರು : ಸೋಮಿ, ಸತ್ತೋಗ್ತೀವಿ, ಸೋಮಿ, ರಕ್ತ ಸುರೀತಾ ಇದೆ. ಇಂಥ ತಪ್ಪು ಇನ್ಮಾಡೋಲ್ಲ, ದೇವ್ರೆ (ಅವರಲ್ಲೊಬ್ಬ, ಕೃಷ್ಣ ಏಟು ತಡೆಯಲಾರದೆ ಮೂರ್ಛೆ ಹೋಗುತ್ತಾನೆ. ಇತರರು ಲಬೋ ಲಬೋ ಎಂದು ಬಾಯಿ ಬಡಿದುಕೊಳ್ಳುತ್ತಾರೆ. ಅಷ್ಟರಲ್ಲಿ ದೇವಾಲಯದ ಹೊರಗೆ ಬಂದ ಬಸವಣ್ಣ ಆ ಕರಾಳ ದೃಶ್ಯವನ್ನು ನೋಡಿ, ಮೈಮೇಲೆ ಬಂದವನಂತೆ ಓಡೋಡಿ ಬಂದು, ಹಿಂಸಕರ ಮುಂದೆ ನಿಂತು)

ಬಸವಣ್ಣ : ಏನೂ ತಿಳಿಯದ ಈ ಮುಗ್ಧ ಮಕ್ಕಳನ್ನೇಕೆ ಸಾಯಿಸುತ್ತೀರ? ನನ್ನನ್ನು ಹೊಡೆದು ಸಾಯಿಸಿ. ಅಯ್ಯೋ ಶಿವನೆ, ನಿನಗೂ ಕರುಣೆ ಬೇಡವೆ?"[೨]

ಮೇಲಿನ ದೃಶ್ಯದಲ್ಲಿ ದಲಿತ ಮಕ್ಕಳ ಅಸಹಾಯಕತೆ, ದೊಡ್ಡವರೆನಿಸಿಕೊಂಡ ಮೂರ್ಖರ ಬಗೆಗಿನ ಭಯ, ಭಕ್ತಿ ಕಾಣಸಿಗುತ್ತದೆ. ೧೨ನೇ ಶತಮಾನದಲ್ಲಿ ಸಂಪ್ರದಾಯಸ್ಥ ಮೇಲ್ಜಾತಿಯವರು ತಮ್ಮ ಬದುಕನ್ನು ಹಸನಾಗಿಸಿಕೊಂಡು ದಲಿತರನ್ನು

ತಮ್ಮ ಕಾಲ್‌ಕಸವನ್ನಾಗಿ ಮಾಡಿಕೊಂಡಿದ್ದರು ಎಂಬುದಕ್ಕೆ ಹಲವು ಉದಾಹರಣೆಗಳು ನಮಗೆ ಕಾಣಸಿಗುತ್ತವೆ. ಅಂತಹ ಒಂದು ಸನ್ನಿವೇಶವನ್ನು ಲೇಖಕರು ಉತ್ತಮವಾಗಿ ತಮ್ಮ ನಾಟಕದಲ್ಲಿ ತಂದಿದ್ದಾರೆ. ಅಲ್ಲದೆ ಮೇಲ್ಜಾತಿಯಲ್ಲೇ ಹುಟ್ಟಿ ಬೆಳೆದು ಅಲ್ಲಿರುವ ಜಾತ್ಯಾಂಧರು ಮತ್ತು ಅವಿವೇಕಿಗಳಿಗಿಂತ ಭಿನ್ನವಾದ ವ್ಯಕ್ತಿತ್ವವನ್ನು ಉಳ್ಳವರು ಬಸವಣ್ಣ. ಇವರು ಸಮಾಜದಲ್ಲಿರುವ ಜಾತಿ, ಧರ್ಮದಲ್ಲಿನ ಅಸಮಾನತೆ ಹಾಗೂ ದಲಿತರ ಬದುಕನ್ನು ಹಸನುಮಾಡಲು ತಮ್ಮ ಬದುಕನ್ನೇ ಮುಡಿಪಾಗಿಟ್ಟರು. ಕೊನೆಗೆ ವರ್ಣ ಸಂಘರ್ಷದಿಂದ ತಮ್ಮ ಪ್ರಾಣವನ್ನೇ ಕಳೆದುಕೊಂಡರು. ಮೇಲಿನ ದೃಶ್ಯ ಇದಕ್ಕೆ ಸಾಮ್ಯವಾದ ಅಂಶವನ್ನು ಹೊಂದಿದೆ.

ಮನುಷ್ಯರು ಮನುಷ್ಯರನ್ನು ಪ್ರೀತಿಯಿಂದ ಕಾಣುವ ಹಾಗೂ ಅವರೊಂದಿಗೆ ಸೌಜನ್ಯದಿಂದ ನಡೆದುಕೊಳ್ಳುವ ಗುಣವನ್ನು ಕಲಿಯಬೇಕು. ಕ್ಷುಲ್ಲಕ ಕಾರಣವನ್ನೇ ಇಟ್ಟುಕೊಂಡು ಅವರನ್ನು ನೋಯಿಸುವ ಪ್ರಯತ್ನ ಸರಿಯಲ್ಲ. ಈ ರೀತಿಯ ಶೋಷಣೆಯಿಂದ ನೊಂದುಬೆಂದು ತಮ್ಮ ಬದುಕನ್ನು ಕತ್ತಲಾಗಿಸಿಕೊಂಡು ದಲಿತರು ಪುಟಿದೆದ್ದು ನಿಲ್ಲುವ ಶಕ್ತಿಯಿಲ್ಲದೆ ಕೊರಗಿ ಕಂಗಾಲಾಗಿದ್ದಾರೆ. ಆದರೂ ಅವರ ಮನಸ್ಸಿನಲ್ಲಿ ನೋವಿನ ಕಿಡಿಯಾಡುತ್ತಿರುತ್ತದೆ. ಅಲ್ಲದೇ ಅಸಹಾಯಕ ಮನೋಭಾವನೆ ಕಂಡುಬರುತ್ತದೆ. ಅಂತಹ ಒಂದು ದೃಶ್ಯ ಹೀಗಿದೆ.

**"ನಾಗ ಮೊದಲಾದವರು:** ಅಯ್ಯಯ್ಯೋ, ಈ ನಮ್ಮಕ್ಳನ್ನ ದನ ಚಚ್ಚುವ ಹಾಗೆ ಚಚ್ಚಿದ್ದಾರಲ್ಲಪ್ಪ. ಅಯ್ಯೋ ದೇವರೆ, ನಮ್ಮನ್ಯಾಕಪ್ಪ ಹುಟ್ಟಿಸ್ದೆ. ಮರವಾಗದ್ರೂ ಹುಟ್ಟಿದ್ರೆ, ಈ ನಮ್ಮಕ್ಳನ್ನ ಚಚ್ಚಿದೋರ್ಗೆ ನೆರಳಾಗ್ತಿದ್ದೆವು.

**ಕಾಳ :** ನಮ್ಮನ್ನ ಈ ಗತಿಗೆ ತಂದವರ ಸುಳಿ ಸತ್ತೋಗ್ಬಾರದೆ?

**ನಾಗ :** ಈ ಹಾರುವರು ಎಲ್ಲಿ ಸತ್ತಾರೋ. ಅವರ ಕುಡಿ ಬೆಳೀತಾ ಇದೆ. ಅವ್ರು ಜೋರಾಗ್ತಾ ಅವ್ರೆ.

**ಕಾಳ :** ಈ ದೇಶಾನ ಪರರ ಕೈಗೆ ಕೊಟ್ಟು ಇವ್ರೂ ಹಾಳಾಗ್ತಾರೆ; ನೋಡ್ತಾ ಇರು.

**ಬಸವಣ್ಣ :** ಆ ಮಾತೆಲ್ಲ ಈಗ ಬೇಡ, ಅಣ್ಣಾ. ಈ ಮಕ್ಕಳ ಕೈಕಾಲು ತೊಳೆದು ಗಾಯಗಳಿಗೆ ಮದ್ದು ಹಚ್ಚ."[೩]

ಇಂದು ಸಾಂಪ್ರದಾಯಿಕ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ಜಾತಿಗಳ ನಡುವೆ ಅಂತರ ಅಪಾರವಾಗಿದೆ. ತೋರಿಕೆಯ ಮಾತನಾಡುವ ನಡೆದುಕೊಳ್ಳುವ ವ್ಯವಹರಿಸುವ ಬಗೆ ಹೆಚ್ಚಾಗಿ ಕಂಡುಬರುತ್ತಿದೆ. ಭಾರತದಲ್ಲಿ ಇದುವರೆಗೂ ನಡೆದ

ರಾಷ್ಟ್ರೀಯ ಆಂದೋಲನ ಜಾತಿಪದ್ಧತಿಯ ವಿರುದ್ಧ ನಡೆಸಿದ ಹೋರಾಟದಿಂದಾಗಿ ಹಿಂದುಳಿದವರು, ಶೂದ್ರರು ಒಂದು ಹಂತದ ಬದುಕನ್ನು ನಡೆಸುವಂತಾಗಿದೆ. ಅಸ್ಪೃಶ್ಯತೆ, ಶೋಷಣೆ ನಡೆಯುವ ಮತ್ತು ನಡೆಸುವವರ ವಿರುದ್ಧ ಒಂದು ಘಟ್ಟಿಯಾದ ಕೂಗು ಕೇಳಿಸುತ್ತಿದೆ.

ದೇಜಗೌರವರ ಎರಡು ನಾಟಕಗಳನ್ನು ಒಟ್ಟಾಗಿ ಗಮನಿಸಿದಾಗ ಕರ್ನಾಟಕದಲ್ಲಿರುವ ಸಾಂಸ್ಕೃತಿಕ ಮೌಲ್ಯದ ಅನ್ವೇಷಣೆಯ ಕಾರ್ಯ ನಡೆದಿದೆ. ಇಲ್ಲಿನ ರಾಜರು ಸಾಹಿತ್ಯ ಮತ್ತು ಕಲೆಗೆ ನೀಡಿರುವ ಪ್ರೋತ್ಸಾಹವನ್ನು ಗಮನಿಸಬಹುದು.

"**ಶಾಂತಲೆ** : ಕಲಾಬಂಧುಗಳೆ, ಇಷ್ಟರಿಂದಲೇ ದೇವಾಲಯದ ಕೆಲಸ ಮುಗಿಯಿತೆಂದು ತಿಳಿಯಬೇಡಿ. ಕಲೆ ಸಂಸ್ಕೃತಿಯ ತಾಯಿ ಬೇರಷ್ಟೆ. ನಮ್ಮ ರಾಷ್ಟ್ರ ಸಂಸ್ಕೃತಿಯ ಜೀವಾಳ ಅಲ್ಲಿಯ ಮಹಾಕಾವ್ಯಗಳಲ್ಲಿದೆ. ದೇವಸ್ಥಾನಕ್ಕೆ ಬಂದ ಭಕ್ತರು ಮಹಾಕಾವ್ಯಗಳನ್ನು ದೃಶ್ಯರೂಪದಲ್ಲಿ ಕಾಣುವಂತಿರಬೇಕು.

**ಡಕಣ** : ಈ ದೇವಾಲಯ ಸರ್ವಕಲೆಗಳ ಸಂಗಮವಾಗುವುದಾದರೆ,

ಅದಕ್ಕೊಂದು ಸಮಗ್ರತೆ ಸಮನಿಸಿ ಸರ್ವಾಕರ್ಷಣೀಯ-ವಾಗುತ್ತದೆ. ನೃತ್ಯ ಕಲೆಯೊಂದು ಸೇರಿದರೆ ಅದು ಪೂರ್ಣವಾಗುತ್ತದೆ. ಸನ್ನಿಧಾನ ನನ್ನ ಸಲಹೆಯನ್ನು ಪರಾಂಬರಿಸಬೇಕು."[೪]

ಕನ್ನಡ ನಾಡಲ್ಲಿ ಸುಪ್ರಸಿದ್ಧ ಶಿಲ್ಪ ಕಲಾ ಪರಿಣತರು ತಮ್ಮ ಕಲಾಶೈಲಿಯಿಂದ ಕನ್ನಡನಾಡಿನ ಹಲವು ದೇವಾಲಯಗಳಲ್ಲಿ ತಮ್ಮ ಛಾಪನ್ನು ಮೂಡಿಸಿದ್ದಾರೆ. ಅವರಲ್ಲಿ ಡಕಣಾಚಾರಿ, ಅಮರಶಿಲ್ಪಿ ಜಕಣ, ದಾಸೋಜ ಮುಂತಾದವರು. ವರ ದೇವಾಲಯಗಳ ರಚನಾ ಶೈಲಿಯಿಂದಾಗಿ ಇಂದಿಗೂ ಅವರ ಹೆಸರು ಜೀವಂತವಾಗಿದೆ. ಇಂತಹ ದೇವಾಲಯಗಳೆಂದರೆ ಬೇಲೂರಿನ ಚನ್ನಕೇಶವ ದೇವಾಲಯ, ಲಕ್ಷ್ಮಿನರಸಿಂಹ ದೇವಾಲಯ ಹಾಗೂ ಹಳೇಬೀಡಿನ ಹಲವು ದೇವಾಲಯಗಳು ಉತ್ತಮ ಪ್ರೇಕ್ಷಣೀಯ ಸ್ಥಳಗಳಾಗಿವೆ.

ದೇಜಗೌ ಅವರು ರಚಿಸಿರುವ ಹೊಯ್ಸಳೇಶ್ವರ ಶಾಂತಲಾ ನಾಟಕದಲ್ಲಿನ ಶಾಂತಲೆಯು ಅತ್ಯಂತ ಉದಾರ ವ್ಯಕ್ತಿತ್ವವುಳ್ಳವರು. ಆಕೆ ಸುಸಂಸ್ಕೃತಿಯ ಸಮಗ್ರತೆಯನ್ನು ಪ್ರತಿನಿಧಿಸುವಳು. ಆಕೆಗೆ ಸರಿಸಮಾನವಾದ ಸ್ತ್ರೀ ಪಾತ್ರ ಹೊಯ್ಸಳರಲ್ಲಿ ಮತ್ತೊಂದಿಲ್ಲ. ಕನ್ನಡನಾಡು ಮತ್ತು ಸಂಸ್ಕೃತಿಗೆ ತದ್ವಿರುದ್ಧವಾದ ವ್ಯಕ್ತಿಗಳನ್ನು ಕಂಡರೆ ಆಕೆ ಸಿಡಿದೇಳುತ್ತಿದ್ದಳು. ಬಲಿಷ್ಠ ಹೆಣ್ತನದ ವ್ಯಕ್ತಿತ್ವದವಳು ಶಾಂತಲೆ. ಅವಳ ಶರೀರದ

ಚೆಲುವು, ದುಡಿಯುವ ಸಾಮರ್ಥ್ಯ, ದೇಹಬಲ, ಕಲೆ ಸಾಹಿತ್ಯದಲ್ಲಿ ಮೇರುಪರ್ವತ. ಯುದ್ಧ ಕೌಶಲ ಮಲ್ಲಯುದ್ಧ, ನೃತ್ಯ ಎಲ್ಲವನ್ನೂ ಅರಗಿಸಿಕೊಂಡವಳು. ಚಟುವಟಿಕೆಯಿಂದಿರುತ್ತಾ ಸೈನಿಕರನ್ನು ಕಾರ್ಯಪ್ರವೃತ್ತಿಯಲ್ಲಿ ತೊಡಗಿಸಿಕೊಳ್ಳುತ್ತಿದ್ದಳು. ಒಟ್ಟಿನಲ್ಲಿ ಅವಳ ಅಧಿಕಾರದಲ್ಲಿನ ದಕ್ಷತೆ ಗಮನಾರ್ಹ. ದೇಜಗೌ ಅವರು ಆಕೆಯ ಪಾತ್ರಕ್ಕೆ ಒಂದು ಮೆರುಗನ್ನು ನೀಡಿದ್ದಾರೆ.

"**ಶಾಂತಲೆ** : ರಾಕ್ಷಸೀಕೃತ್ಯಗಳ ಬಿಡುವಂತೆ
ಶತ್ರುಗಳ ಚಲನವಲನಗಳ ಎಚ್ಚರದಿ ಗಮನಿಸುವಂತೆ
ದಳನಾಯಕರ ಲಕ್ಷ್ಯಕ್ಕೆ ತಂದಿಹೆನು.

**ವಿಷ್ಣು** : ಕಲಹಗುಳಿ ಭೂಪತಿ ಕುಲೋತ್ತುಂಗ ಧರ್ಮಬಾಹಿರನ್
ಚೋಳ ಸೇನಾಧಿಪತಿ ಆದಿಯಮ ಯಮನೆ ಸರಿ.
ಇನ್ನನ್ನರಿಂ ಧರ್ಮಯುದ್ಧದ ನಿರೀಕ್ಷೆ ಸಲ್ಲದು, ನೀರೆ

**ಶಾಂತಲೆ** : ಧರ್ಮಾಧರ್ಮಪ್ರಜ್ಞೆ ಯಮನಿಗಿದೆ ಪ್ರಭು,
ಅನ್ಯಾಕ್ರಮಣಕಾರರಿಗಿಲ್ಲ. ಕ್ರೂರಿಗಳ್ ಮಾನವದ್ವೇಷಿಗಳವರ್
ಸೈನಿಕರ ಬಲಿಗೊಟ್ಟು ಮಡದಿ ಮಕ್ಕಳನ್ ತಬ್ಬಲಿಗೊಳಿಸಿ
ಶಾಂತಿಪ್ರಿಯ ಮುಗ್ಧರನ್ ಮಾರಿಗೌತಣವಿಕ್ಕುವುದು
ಸಾಹಸವೆ ಅಲ್ಲಲ್ತು ಬರ್ಬರತೆ."[೫]

ಹೀಗೆ ವಿಷ್ಣುವರ್ಧನ ಮತ್ತು ಶಾಂತಲೆಯರು ನಾಡರಕ್ಷಣೆಗಾಗಿ ಸದಾ ಸಿದ್ಧರಿದ್ದರು. ಇಬ್ಬರೂ ಸಾಮ್ರಾಜ್ಯ ರಕ್ಷಣೆಗೆ ಅನ್ಯೂನ್ಯ ಭಾವದಿಂದ ಮುನ್ನುಗ್ಗುತ್ತಿದ್ದರು. ಲೇಖಕರು ಮೇಲಿನ ದೃಶ್ಯದಲ್ಲಿನ ಸಂಭಾಷಣೆಯನ್ನು ಕ್ರಮಬದ್ಧವಾದ ಧಾಟಿ ಹಾಗೂ ನೈಜ ದೃಶ್ಯದಂತೆ ನಿರೂಪಿಸಿದ್ದಾರೆ. ಇತಿಹಾಸ ಪ್ರಜ್ಞೆಯನ್ನು ಇಟ್ಟುಕೊಂಡ ಇವರು ಇಂತಹ ಸನ್ನಿವೇಶಗಳನ್ನು ತಮ್ಮ ನಾಟಕಗಳಲ್ಲಿ ಅನೇಕಕಡೆ ಸರಾಗವಾಗಿ ಮತ್ತು ಯಶಸ್ವಿಯಾಗಿ ತಂದಿದ್ದಾರೆ.

ಸ್ತ್ರೀಪರ ನಿಲುವುಗಳನ್ನು ಎರಡು ನಾಟಕಗಳಲ್ಲಿಯೂ ಕಾಣಬಹುದಾಗಿದೆ. ಕನ್ನಡಪರ ಹೋರಾಗಾರರಾದ ದೇಜಗೌರವರು ಸ್ತ್ರೀಪರ ನಿಲುವು ಹಾಗೂ ಗೌರವವನ್ನು ಹೊಂದಿದ್ದರು. ೧೨ನೇ ಶತಮಾನದಲ್ಲೇ ಶರಣರು ಅನುಭವ ಮಂಟಪದಲ್ಲಿ ಸ್ತ್ರೀಯರಿಗೂ ಸಮಾನ ಸ್ಥಾನಮಾನ, ಅವರ ಬಗೆಗೆ ಕಾಳಜಿ ಹಾಗೂ ಅವರ ಚಿಂತನೆಗೂ ಅವಕಾಶ ಕಲ್ಪಿಸಿದ್ದರು. ಅಕ್ಕಮಹಾದೇವಿ ಮಹದೇವಿಯಮ್ಮ ಅಮುಗೆಯ ರಾಯಮ್ಮ, ಲಿಂಗಮ್ಮನವರಂತಹವರು ಅಂದೇ ಸ್ತ್ರೀಪರ ಜಾಗೃತಿ ಹಾಗೂ ಗಟ್ಟಿ ನಿಲುವನ್ನು ಹೊಂದಿದ್ದರು. ಇವರು ತಮ್ಮ ತತ್ವ ಸಿದ್ಧಾಂತ ಹಾಗು ಚಿಂತನೆಯಲ್ಲಿ

ಪುರುಷರಿಗೆ ಸಮಾನವಾಗಿದ್ದರು ನಾಟಕದಲ್ಲಿ ಲೇಖಕರು ಸಹ ಅದನ್ನು ಕುರಿತು ಸ್ವಾರಸ್ಯವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಆ ಕುರಿತ ಒಂದು ದೃಶ್ಯ ಈ ರೀತಿ ಇದೆ.

"ಬಸವಣ್ಣ : ಮೋಳಿಗೆಯ ಮಹಾದೇವಿಯಮ್ಮನವರು ಸುಮ್ಮನೆ
ಕುಳಿತಿದ್ದಾರಲ್ಲ!

ಮಹಾದೇವಿಯಮ್ಮ: ತಿಳಿದವರು ಮಾತಾಡುವಾಗ, ಅವರ ಮಾತು
ಕೇಳುವುದೇ ಆನಂದ
ನೀರು ನೆಲವಿಲ್ಲದೆ ಇರಬಹುದೇ!
ಬೀಜ ನೆಲೆಯಿಲ್ಲದೆ ಹುಟ್ಟಬಹುದೇ!
ಜ್ಞಾನ ಕ್ರಿಯೆಯಿಲ್ಲದೆ ಅರಿಯಬಹುದೇ!
ಚಿತ್ತ ಚಿತ್ತುವಿಲ್ಲದೆ ವಸ್ತುವ ಲಕ್ಷಿಸಿ ಗ್ರಹಿಸಬಲ್ಲುದೆ!

"ಚೆನ್ನಬಸವಣ್ಣ : ಹಡಪದಪ್ಪಣ್ಣಗಳ ಪುಣ್ಯಾಂಗನೆ ಲಿಂಗಮ್ಮನ
ಚೆನ್ನುಡಿಗಳನ್ನು ಕೇಳಬಹುದೇ?

ಲಿಂಗಮ್ಮ : ದೊಡ್ಡವರ ಮುಂದೆ ನಾನೇನು ಹೇಳುವುದಿದೆ, ತಂದೆ?
ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ,
ಸತ್ಯಶರಣರ ಪಾದವಿಡಿದೆ.
ಆ ಶರಣರ ಪಾದವಿಡಿದು ಗುರುವ ಕಂಡೆ, ಲಿಂಗವ
ಕಂಡೆ,
ಜಂಗಮರ ಕಂಡೆ, ಪಾದೋದಕವ ಕಂಡೆ, ಪ್ರಸಾದವ
ಕಂಡೆ.
ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ
ಹರಿಯಿತ್ತು.
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ
ಜಾತಿಸೂತಕವೆಲ್ಲ ಸತ್ತು
ನಿಜಮುಕ್ತಳಾದೆನಯ್ಯ
ಜ್ಞಾನಗಣ್ಣಲಿ ನಿಮ್ಮನೆ ನೋಡಿ ಸುಖಿಯಾದೆನಯ್ಯ
ಮಂಗಳದ ಮಹಾಬೆಳಗಿನೊಳಗೋಲಾಡಿ
ಶುಚಿಯಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣ."[೬]

ಅನುಭವ ಮಂಟಪದಲ್ಲಿ ಎಲ್ಲರೂ ಸಮಾನರು ಮತ್ತು ತಮ್ಮ ನಿಲುವುಗಳನ್ನು, ಚಿಂತನೆಯನ್ನು, ಹಂಚಿಕೊಳ್ಳಲು ಸಮಾನ ಅವಕಾಶಗಳನ್ನು ಕಲ್ಪಿಸಲಾಗಿತ್ತು. ಅಲ್ಲಿ ಅಲ್ಲಮರಂತಹ, ಬಸವಣ್ಣರಂತಹ ಜ್ಞಾನಿಗಳಿದ್ದಂತೆ, ಅಕ್ಕಮಹಾದೇವಿ, ಮಹಾದೇವಿಯಮ್ಮರಂತಹ ಶರಣೆಯರಿದ್ದರು ಈ ಸನ್ನಿವೇಶವನ್ನು ಲೇಖಕರು ಸೊಗಸಾಗಿ ತಂದಿದ್ದಾರೆ.

ಲೇಖಕರು ತಮಗಿದ್ದ ಸ್ತ್ರೀಪರ ಕಾಳಜಿಯನ್ನು ತಮ್ಮ ಹೊಯ್ಸಳೇಶ್ವರಿ ಶಾಂತಲಾ ನಾಟಕದಲ್ಲಿಯೂ ತಂದಿದ್ದಾರೆ.

"ಚಂದಲೆ : ಹೆಣ್ಣುಮಕ್ಕಳಿಗೆ ನೃತ್ಯ ಸಂಗೀತಾಭ್ಯಾಸ ಸರಿ
ಸಮರ ಕಲೆ ಏಕೆ! ಅದು ಗಂಡಸರಿಗೆ ಮಾತ್ರ
ಮೀಸಲೆಂದು ಹೇಳುವವರಿದ್ದಾರಲ್ಲ. ಅಂಥ
ಹೇಳಿಕೆಗಳಿಗೆ ನಿನ್ನ ಪ್ರತಿಕ್ರಿಯೆಯೇನು

ಶಾಂತಲೆ : ಗಂಡು ಹೆಣ್ಣುಗಳಿಗಿರುವ ಭೇದ ಲಿಂಗದಲ್ಲಿ ಮಾತ್ರ
ಪ್ರಾಣಿಲೋಕ ಸಸ್ಯಲೋಕಗಳಲ್ಲಿಯೂ ಈ ಭೇದವುಂಟು
ಉಳಿದ ಲಿಂಗಗಳಲ್ಲಾಗಲಿ ಅವುಗಳ ಕರ್ತವ್ಯದಲ್ಲಾಗಲಿ
ಏನೇನೂ ವ್ಯತ್ಯಾಸವಿಲ್ಲ. ಲಿಂಗ ಸೃಷ್ಟಿಯ ಸಂಕೇತ,
ಆದ್ದರಿಂದಲೇ ಅದು ಪವಿತ್ರವಾದುದು, ಇಬ್ಬರಿದ್ದರೇನೇ
ಸೃಷ್ಟಿಯ ಕಾರ್ಯಸಾಧ್ಯ. ಸೃಷ್ಟಿ ಕರ್ತನಾದ ಭಗವಂತ
ಪೂಜನೀಯನಲ್ಲವೇ? ಆದ್ದರಿಂದ ಸೃಷ್ಟಿಯ ಉದ್ದೇಶ
ಈಡೇರಬೇಕಾದರೆ ಇಬ್ಬರೂ ಸರಿಸಮನಾಗಿ ಸಾಧನೆ
ಮಾಡಬೇಕಾಗಿದೆ."[2]

ಲಿಂಗದ ಆಧಾರದ ಮೇಲೆ ಸ್ತ್ರೀ ಶೋಷಣೆ ಸರಿಯಲ್ಲ. ಪುರುಷರಂತೆ ಕಲಿಕೆ, ಉದ್ಯೋಗ, ಶೌರ್ಯಗಳಲ್ಲಿ ಅವಳಿಗೂ ಸಮಾನ ಅವಕಾಶ ಸಿಗಬೇಕೆಂಬ ನಿಲುವು ಶಾಂತಲೆಯದು.

ಮತಾಂತರದ ಕಲ್ಪನೆ ನಮ್ಮಲ್ಲಿ ಹೊಸದೇನಲ್ಲ ಪ್ರಾಚೀನ ಕಾಲದಿಂದಲೂ ಮತಾಂತರ ನಡೆಯುತ್ತಲೇ ಬಂದಿವೆ. ಹೊಸ ಆಲೋಚನೆ ಮತ್ತು ಜೀವನ ಕ್ರಮದ ಬದಲಾವಣೆಗೆ ಮತಾಂತರ ದಾರಿಮಾಡಿಕೊಟ್ಟಿದೆ. ಹಿಂದು ಧರ್ಮದಲ್ಲಿನ ಚಾತುರ್ವರ್ಣ ಪದ್ಧತಿಯಲ್ಲಿ ಶ್ರೇಣೀಕೃತ ಜಾತಿವ್ಯವಸ್ಥೆ ಇದೆ. ಅಲ್ಲದೆ ಜಾತಿಸಂಕರ, ವರ್ಣಸಂಕರ-ಕ್ಕೊಳಗಾದವರು ಪಂಚಮರೆಂದೆನಿಸಿಕೊಂಡರು. ಮೇಲ್ಜಾತಿಯಿಂದ ಅಲಕ್ಷ್ಯಕ್ಕೊಳಪಟ್ಟ

ಕೆಳಜಾತಿಯವರು ಉತ್ತಮ ಭವಿಷ್ಯ ರೂಪಿಸಿಕೊಳ್ಳಲು ಅನ್ಯಧರ್ಮಗಳ ಆಶ್ರಯ ಪಡೆದರು.

ಮೊದಲಿನಿಂದಲೂ ವೈಧಿಕ ಧರ್ಮವನ್ನು ವಿರೋಧಿಸಿ ಹಲವು ಧರ್ಮಗಳು ಉದಯಿಸಿದವು. ಅವುಗಳಲ್ಲಿ ಜೈನಧರ್ಮ, ಬೌದ್ಧಧರ್ಮ, ವೈಷ್ಣವಧರ್ಮ ಹಾಗು ವೀರಶೈವಧರ್ಮ ಮುಂತಾದ ಧರ್ಮಗಳಿವೆ. ಆದರೆ ಇವುಗಳಾವುವು ಇಂದು ಅಸ್ತಿತ್ವದಲ್ಲಿ ಪೂರ್ಣ ಪ್ರಮಾಣದಲ್ಲಿ ಉಳಿದಿಲ್ಲವೆಂಬುದು ಮಹತ್ವದ ಸಂಗತಿ. ಇವುಗಳು ಮೂಲೆಗುಂಪಾಗಿರುವುದು ಇತಿಹಾಸ. ಕ್ರಾಂತಿ ಕಹಳೆ ನಾಟಕದಲ್ಲಿ ತುಳಿತಕ್ಕೊಳಪಟ್ಟ ದಲಿತ ವರ್ಗದವರು ತಮ್ಮ ಬದುಕಿನ ಜಡತ್ವವನ್ನು ಚಲನಶೀಲಗೊಳಿಸಲು ಹಾಗು ವ್ಯವಸ್ಥಿತ ಜೀವನಕ್ಕೆ ದಾರಿಮಾಡಿಕೊಳ್ಳಲು ಬಸವಣ್ಣನವರ ನಾಯಕತ್ವದ ವೀರಶೈವ ಧರ್ಮವನ್ನು ಸೇರಿ ಶರಣರೆನಿಸಿ ಕೊಂಡರು. ಅಂದಿನಿಂದ ದಲಿತರೆಂಬ ಪಟ್ಟದಿಂದ ದೂರವುಳಿದರು. ಆದರೂ ಮೇಲ್ವರ್ಗದವರು ಇವರ ಮೇಲೆ ದೌರ್ಜನ್ಯ ನಡೆಸುವುದನ್ನು ಬಿಡಲಿಲ್ಲ. ಹರಳಯ್ಯನಂತ ಮಹಾನ್ ಶಿವಶರಣರು ಇಂತಹ ಶೋಷಣೆಯನ್ನು ಧೈರ್ಯವಾಗಿ ಮೆಟ್ಟಿನಿಂತರು. ಇದಕ್ಕಾಗಿ ತನ್ನ ಪ್ರಾಣವನ್ನೇ ಮುಡಿಪಾಗಿಟ್ಟರು. ಹಾಗಾಗಿಯೇ ಹರಳಯ್ಯನಂತ ಶರಣರು ನಮಗಿಂದು ಪ್ರಸ್ತುತ.

೧೨ನೇ ಶತಮಾನದಿಂದಲೂ ಶರಣ ಧರ್ಮದ ಸೂತ್ರವನ್ನು ಹಿಡಿದ ಬಹುಪಾಲು ಶರಣರೆಲ್ಲ ವೈಧಿಕ ಮತದಿಂದ ಬಂದವರೆ. ಪ್ರಸಿದ್ಧ ವಚನಕಾರ ಬಸವಣ್ಣ, ಅಲ್ಲಮ ಮುಂತಾದ ಶರಣರು ತಮ್ಮ ಧರ್ಮದಲ್ಲಿನ ತಾರತಮ್ಯ ಭಾವಗಳಿಂದ ಬೇಸತ್ತು ಹೊರಬಂದು ಶರಣ ಧರ್ಮವನ್ನು ಕಟ್ಟಿ ಬೆಳೆಸಿದರು. ಎಲ್ಲೆಡೆ ಶರಣರನ್ನು ಕಲೆಹಾಕಿ ಸಾಮಾಜಿಕ ಅಸಮಾನತೆ, ಜಾತೀಯತೆ, ಅಂತರ್‌ಜಾತಿ ವಿವಾಹ ಮಾಡಿಸಿದರು. ಅಲ್ಲದೆ ಹರಳಯ್ಯ, ಕಕ್ಕಯ್ಯರಂತ ದಲಿತ ಶರಣರಿಗೂ ಸಮಾನ ಸ್ಥಾನಮಾನ ನೀಡಿದರು.

ಹೊಯ್ಸಳೇಶ್ವರಿ ಶಾಂತಲಾ ನಾಟಕದಲ್ಲೂ ಮತಾಂತರ ಕಲ್ಪನೆಯನ್ನು ಕಾಣಬಹುದು. ಆ ಕಾಲದಲ್ಲಿ ಶೈವ, ವೈಷ್ಣವ ಮತ್ತು ಜೈನಧರ್ಮಗಳನ್ನು ಕಾಣಬಹುದು. ರಾಮಾನುಜಾಚಾರ್ಯರ ತತ್ವಸಿದ್ಧಾಂತದ ಹಿನ್ನೆಲೆಯಲ್ಲಿ ಹೊಯ್ಸಳ ನಾಡಿನ ಸಾವಿರಾರು ಜನರು ಶೈವಧರ್ಮದಿಂದ ವೈಷ್ಣವ ಮತಕ್ಕೆ ಮತಾಂತರರಾದರು. ಇಲ್ಲಿ ಶಾಂತಲೆ ಮತ್ತು ವಿಷ್ಣುವರ್ಧನರು ಸರ್ವಧರ್ಮಗಳನ್ನು ಪೋಷಿಸುತ್ತ ಎಲ್ಲರಿಗೂ ಸರ್ವಸಮಾನ ಸ್ಥಾನಮಾನ ದೊರಕಿಸಿದ್ದರು. ಶೈವ ಮತ್ತು ವೈಷ್ಣವ ದೇವಾಲಯ ಗಳನ್ನು ಕಟ್ಟಿಸಿದ್ದರು. ಶಾಂತಲೆ ಮತ್ತು ಆಕೆಯ ತಂದೆ ಮಾರಸಿಂಗಮಯ್ಯ, ಮಯೂರಿ, ಈರಣ್ಣ ಮೊದಲಾದವರು ಶೈವರು ಈಕೆಯ ತಾಯಿ ಮಾಚಿಕಬ್ಬೆ ಜೈನಮತ ಸ್ವೀಕರಿಸಿದ್ದಳು. ಅಲ್ಲದೆ ಕೊನೆಗಾಲದಲ್ಲಿ ಶ್ರವಣಬೆಳಗೊಳಕ್ಕೆ ಹೋಗಿ ಸಲ್ಲೇಖನ ವ್ರತ

ಸ್ವೀಕರಿಸಿದಳು. ಆದರೆ ಶಾಂತಲೆ ಸಿದ್ದಗಂಗೆಗೆ ಹೋಗಿ ಅಲ್ಲೇ ತನ್ನ ಕೊನೆಯುಸಿರೆಳೆದಳು.

ವಿಷ್ಣುವರ್ಧನನಾದರೋ ಶೈವ ಮತ್ತು ವೈಷ್ಣವ ಎರಡು ಧರ್ಮಗಳ ಬಗ್ಗೆಯೂ ಒಲವಿದ್ದವನು. ಈತ ರಾಮಾನುಜರ ತತ್ವಸಿದ್ಧಾಂತ ಹಾಗೂ ಕಾರ್ಯವ್ಯಾಪ್ತಿಯಿಂದ ಆಕರ್ಷಿತನಾಗಿ ವೈಷ್ಣವ ಧರ್ಮಕ್ಕೆ ಹೋದನೆಂಬ ದಾಖಲೆ ಇದೆ. ಹೀಗೆ ಅರಮನೆಯಲ್ಲಿ ಎಲ್ಲ ಧರ್ಮಗಳ ಕ್ರೋಢೀಕರಣವಾಗಿದ್ದು ಕಾಣಸಿಗುತ್ತದೆ.

ಒಂದು ವ್ಯವಸ್ಥಿತ ಸಾಮಾಜಿಕ ಬದುಕನ್ನು ಹಾಗೂ ವ್ಯವಸ್ಥೆಯನ್ನು ನಾಶಗೊಳಿಸುವ ಕುತಂತ್ರಿಗಳನ್ನು ನಾವು ದಿನನಿತ್ಯ ಕಾಣಬಹುದಾಗಿದೆ. ಕ್ರಾಂತಿಕಹಳೆ ಮತ್ತು ಹೊಯ್ಸಳೇಶ್ವರಿ ಶಾಂತಲಾ ನಾಟಕದಲ್ಲಿ ಇಂತಹ ಪಾತ್ರಗಳು ಕಾಣಸಿಗುತ್ತವೆ. ಕ್ರಾಂತಿಕಹಳೆಯಲ್ಲಿನ ಮಂಚಣ್ಣ, ಕೇಶವಭಟ್ಟ, ನಾರಾಯಣ ಕ್ರಮಿತ ಮುಂತಾದ ವಿಪ್ರರು ಅಧಿಕಾರದ ಆಸೆಗಾಗಿ ಬಿಜ್ಜಳನ ಮನಸ್ಸಿಗೆ ವಿಷಬೀಜ ಬಿತ್ತಿ ಅವನನ್ನು ಶರಣರ ಧರ್ಮ ಹಾಗೂ ಬಸವಣ್ಣನ ವಿರುದ್ಧ ಎತ್ತಿಕಟ್ಟುತ್ತಾರೆ. ಕೊನೆಗೆ ಬಸವಣ್ಣ, ಬಿಜ್ಜಳರ ಸಾವಿಗೂ ಧರ್ಮ ಕ್ರಾಂತಿಗೂ ಕಾರಣರಾಗುತ್ತಾರೆ.

ಅದೇ ರೀತಿ ಶಾಂತಲಾ ನಾಟಕದಲ್ಲಿನ ಪೆರುಮಾಳ್ ತನ್ನ ಅಧಿಕಾರ ದಾಹ ಹಾಗೂ ಸ್ವಾರ್ಥಕ್ಕೆ ಬಲಿಯಾಗಿ ಸುಭದ್ರ ಸಾಮ್ರಾಜ್ಯ ಹಾಗು ಸರ್ವಧರ್ಮ ಸಮನ್ವಯ ನಾಡನ್ನು ಅವ್ಯವಸ್ಥೆ ಗೊಳ್ಳುವಂತೆ ಮಾಡುತ್ತಾನೆ. ಇವನ ಕುತಂತ್ರದ ಒಂದು ಸನ್ನಿವೇಶ ಹೀಗೆ ಮೂಡಿಬಂದಿದೆ.

"ಲಕ್ಷ್ಮೀ : ಅವರು ಎಂದಿನಂತೆಯೇ ಇದ್ದಾರಪ್ಪ, ಅವರಲ್ಲಿ ಬದಲಾವಣೆ ಏನು ಕಾಣದು.

ಪೆರು : ಕೆಲವರ ಹೃದಯದಲ್ಲಿ ವಿಷ, ನಾಲಗೆಯಲ್ಲಿ ಅಮೃತ, ಅವರ ನಡೆನುಡಿಗಳಲ್ಲಿ ಹೊಂದಾಣಿಕೆಯಿಲ್ಲ, ಅರಮನೆಯ ಜನಕ್ಕೂ ರಾಜಕಾರಣಿಗಳಿಗೂ ವ್ಯತ್ಯಾಸವಿಲ್ಲ.

ಹೇಳುವುದೊಂದಾದರೆ ಮಾಡುವುದೇ ಮತ್ತೊಂದು ಇದೀಗ ನೋಡು ಆ ಪುಣ್ಯಾತ್ಗಿತ್ತಿ. ಇಲ್ಲಿರುವ ತನಕ ಆಚಾರ್ಯರರಿಂದ ಹೊಗಳಿಸಿಕೊಂಡಳಷ್ಟೆ. ಶ್ರೀ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದ್ದೇ ಕಟ್ಟಿಸಿದ್ದು. ಆಚಾರ್ಯರಂಥ ಸ್ಥಿತಪ್ರಜ್ಞರು ಅವಳಿಗೆ ಮರುಳಾದರು. ಅವರು ಊರ ಹೊರಗೆ ಕಾಲಿಟ್ಟಿದ್ದೆ ತಡ, ಎಲ್ಲ ಕಡೆಗೂ ಶೈವದೇವಾಲಯಗಳು ನಿರ್ಮಾಣ ಹಾಗೂ ಜೀರ್ಣೋದ್ಧಾರದಲ್ಲಿ ಮುಳುಗಿದ್ದಾಳೆ.

ಲಕ್ಷ್ಮಿ : ಅದರಲ್ಲ ತಪ್ಪೇನಿದೆಯಪ್ಪ?

ಪೆರು : ಶ್ರೀ ವೈಷ್ಣವರ ಸಂಖ್ಯೆ ಈ ಭಾಗದಲ್ಲಿ ಹೆಚ್ಚುತ್ತಿತ್ತಲ್ಲ, ಅದನ್ನು ತಡೆಗಟ್ಟುವುದೆ ಆಕೆಯ ಉದ್ದೇಶ."[೮]

"ಹರಳಯ್ಯ ವಿಜಯ" ನಾಟಕದಲ್ಲಿ ಇಂಥದೇ ಒಂದು ದೃಶ್ಯ ಕಾಣಸಿಗುತ್ತದೆ.

"ನಾರಾಯಣಕ್ರಮಿತ: ಮಹಾಪ್ರಭು, ಗುಢಾಚಾರರ ಪ್ರಕಾರ ನಾಡಿನಲ್ಲೆಲ್ಲ ರಚ್ಚೆಯೆದ್ದಿದೆ.

ಬಿಜ್ಜಳ : ಕಾರಣವೇನು? ಕ್ಷಾಮವೇ? ಪರರಾಜರ ಧಾಳಿಯೇ?

ನಾರಾಯಣ : ಎರಡೂ ಅಲ್ಲ ಪ್ರಭು, ಅವುಗಳಿಗಿಂತ ಕ್ರೂರವಾದ ವರ್ಣಸಂಕರ, ಜಾತಿಸಂಕರ.

ಬಿಜ್ಜಳ : ಹಾಗೆಂದರೇನು?

ನಾರಾಯಣ : ಶಿವಶಿವಾ, ನನ್ನ ಬಾಯಿಂದ ಅದೆಲ್ಲ ಬರಬಾರದು. ಮಹಾಪಾಪ, ಮಹಾಪಾಪ!"[೯]

ಲೇಖಕರು ಇಂತಹ ನಾಟಕೀಯ ದೃಶ್ಯಗಳನ್ನು ತಮ್ಮ ಎರಡೂ ನಾಟಕಗಳಲ್ಲಿ ಅಲ್ಲಲ್ಲಿ ಬಳಸಿದ್ದಾರೆ. ಅವರ ಉತ್ತಮ ಸಂಭಾಷಣಾ ದಾಟಿಗೆ ಇಂತಹ ದೃಶ್ಯ ಉದಾಹರಣೆಯಾಗಿದೆ.

ಬಿಜ್ಜಳನ ಪಾತ್ರ ಮತ್ತು ಬಸವಣ್ಣರಿಗೆ ಲೇಖಕರು ಮಧುರ ಸ್ನೇಹಬಾಂಧವ್ಯ ಉಳಿಸಿದ್ದಾರೆ. ಬಿಜ್ಜಳ ಸೌಮ್ಯಸ್ವಭಾವಿ ಆತನಿಗೆ ಬಸವಣ್ಣನೆಂದರೆ ಪ್ರೀತಿ ಇವನನ್ನು ಬಿಟ್ಟು ನಾನಿರಲಾರೆ ಎಂಬ ಸ್ಥಿತಿಯಲ್ಲಿ ಬಿಜ್ಜಳನಿರುತ್ತಾನೆ. ಆದರೆ ಕಿಡಿಗೇಡಿಗಳು ಇವರ ಈ ಸ್ನೇಹಕ್ಕೆ ಬೆಂಕಿ ಇಡುತ್ತಾರೆ. ವರ್ಣ ಸಂಘರ್ಷಕ್ಕೆ ದಾರಿಮಾಡುತ್ತಾರೆ. ಕೊನೆಗೆ ಬಿಜ್ಜಳ ಮತ್ತು ಬಸವಣ್ಣ ದೂರವಾಗುವಂತೆ ಮಾಡುತ್ತಾರೆ.

ಲೇಖಕರು ಬಸವಣ್ಣ ಮತ್ತು ಬಿಜ್ಜಳರ ಸ್ನೇಹಬಾಂದವ್ಯ ಹೇಗಿತ್ತು ಎಂಬುದಕ್ಕೆ ನೀಡಿದ ಒಂದು ದೃಶ್ಯ ಹೀಗಿದೆ.

"ಬಿಜ್ಜಳ : ಹಾಹಾ, ಬಸವರಾಜರಿಗೆ, ನನ್ನ ಆತ್ಮ ಸಖನಿಗೆ ಗಡಿಪಾರಾಜ್ಞೆಯೇ? ನಾನೊಬ್ಬ ವಿಶ್ವಾಸ ಘಾತಕ! ನನಗೇನು ಶಿಕ್ಷೆ ಕಾದಿದೆಯೋ ಕಾಣೆ

ಮಂಚಣ್ಣ : ರಾಜ್ಯ ರಕ್ಷಣೆಗೆ ಬೇರೆ ದಾರಿಯಿಲ್ಲ ಪ್ರಭು. ಬಸವಣ್ಣ ಹೇಗೂ ಸಂಗಮಕ್ಷೇತ್ರಕ್ಕೆ ಹೋಗಿ ಸುಖವಾಗಿರುತ್ತಾರೆ ರಾಜ್ಯದಲ್ಲಿ ಶಾಂತಿ ನೆಲೆಸುತ್ತದೆ.

ಬಿಜ್ಜಳ : ಆಗಲಿ, (ಅವರ ವಿಮನಸ್ಕತೆಯ ಸಂದರ್ಭವೇ ಸಕಾಲವೆಂದು ರಾಜಾಜ್ಞೆಗಳಿಗೆ ಅವರ ಸಹಿ ತೆಗೆದುಕೊಳ್ಳುತ್ತಾರೆ. ರಾಜರು ದುಃಖಾರ್ತರಾಗಿ ಖಾಸಾ ಕೋಣೆಗೆ ನಿರ್ಗಮಿಸುತ್ತಾರೆ.)"[೧೦]

ಒಟ್ಟಿನಲ್ಲಿ ದೇಜಗೌರವರ ಹರಳಯ್ಯ ವಿಜಯ ಕನ್ನಡದ ಕ್ರಾಂತಿಕಾರಿ ನಾಟಕ-ಗಳಲ್ಲಿ ಅಗ್ರಮಾನ್ಯವಾದ ಸ್ಥಾನ ಗಳಿಸಿದೆ.

ನಾವು ತಿಳಿದಿರುವಂತೆ ಮೌಖಿಕ ಇತಿಹಾಸದಲ್ಲಿ ಶಾಂತಲೆ ಶಿವಗಂಗೆಯ ಬೆಟ್ಟದಿಂದ ಬಿದ್ದು ಮೃತಳಾಗುತ್ತಾಳೆ. ಆದರೆ ದೇಜಗೌರವರು ಮಾಡಿಕೊಂಡ ಮಾರ್ಪಾಡೆಂದರೆ ಕಲಾವಿದೆಯಾದ ಅವಳು ನೃತ್ಯಮಾಡುವಾಗಲೇ ತನ್ನ ಕೊನೆಯುಸಿರೆಳೆಯುತ್ತಾಳೆ. ಈ ಬದಲಾವನೆ ಅರ್ಥಪೂರ್ಣವೂ ಔಚಿತ್ಯವೂ ಆಗಿದೆ.

ಒಟ್ಟಿನಲ್ಲಿ ದೇಜಗೌರವರ ಈ ಎರಡು ನಾಟಕಗಳನ್ನು ತೌಲನಿಕವಾಗಿ ನೋಡಿದಾಗ ಹಲವು ಕಡೆ ಸಾಮ್ಯತೆಯನ್ನು ಕಂಡುಕೊಂಡದ್ದಲ್ಲದೆ ಹಲವು ವಿಶಿಷ್ಟ ಬದಲಾವಣೆಯಿಂದಲೂ ಕೂಡಿರುವುದನ್ನು ಗಮನಿಸಬಹುದು. ಹಾಗಾಗಿಯೇ ದೇಜಗೌರವರ ಐತಿಹಾಸಿಕ ನಾಟಕಗಳು ವಿಶಿಷ್ಟವಾದ ಸ್ಥಾನವನ್ನು ಪಡೆದಿರುವುದು. ಲೇಖಕರಿಗೆ ಬಸವಣ್ಣ ಮತ್ತು ಹರಳಯ್ಯರ ಮೇಲೆ ಇತಿಹಾಸದ ಹಲವು ಅಂಶಗಳಿಂದ ಒಲವಿದೆ. ಹಾಗಾಗಿಯೇ ಅವರನ್ನು ಕುರಿತ ಹಾಗೆ ನಾಟಕವನ್ನು ರಚಿಸಿರುವುದು.

ಇತಿಹಾಸದ ಒಂದು ಮುಖವನ್ನು ತೋರುವ ಪ್ರಯತ್ನ ಇದಾಗಿದೆ. ಎಂಬುದು ನಿಸ್ಸಂದೇಹವಾಗಿ ಹೇಳಬಹುದು. ಗಾಂಧೀಜಿಯವರು ಹಿಂದು ಮತ್ತು ಮುಸ್ಲಿಮರನ್ನು ಒಂದು ಮಾಡುವ ಪ್ರಯತ್ನದಂತೆ, ಬಸವಣ್ಣನವರು ಜಾತೀಯತೆ, ಸಮಾಜದ ಅಸಮಾನತೆಯನ್ನು ಹೊರದೂಡುವ ಪ್ರಯತ್ನ ಮಾಡಿದರು. ಗಾಂಧಿ ಮತ್ತು ಬಸವಣ್ಣನವರ ತತ್ವ ಒಂದೇ ಎಂಬಂತಿದೆ. ಆದರೆ ಧರ್ಮ ಮತ್ತು ದೇವರುಗಳ ಕಲ್ಪನೆ ಕೊನೆಯಾಗುವ ತನಕ ಯಾವುದೇ ಶರಣರ ಚಳುವಳಿಗಳು, ಧಾರ್ಮಿಕ ಚಳುವಳಿಗಳು, ಇತಿಹಾಸ ಪ್ರಸಿದ್ಧ ವ್ಯಕ್ತಿಗಳು, ಈ ಜಾತೀಯ, ಮತೀಯ ಹಾಗೂ ಸಮಾಜದಲ್ಲಿನ ಅಸಮಾನತೆಯನ್ನು ಪೂರ್ಣವಾಗಿ ಹೊರದೂಡುವುದು ಕಷ್ಟಸಾಧ್ಯವಾದುದಾಗಿ ತೋರಬಹುದು. ಆದರೆ ಈ ಕ್ರಾಂತಿಯ ಪ್ರಭಾವ ಮತ್ತು ಪರಿಣಾಮಗಳು ಕಡಿಮೆಯಲ್ಲ. ಮನುಕುಲ ಇರುವ ತನಕ ಈ ಪ್ರಭಾವ ಇದ್ದೇ ಇರುತ್ತದೆ. ಜಾತ್ಯಾತೀತ ಆದರ್ಶಗಳಿಗೆ ಬದ್ಧರಾಗುವ ವ್ಯಕ್ತಿಗಳು ಇದ್ದೇ ಇರುವರು. ಅವರಿಂದ ಇಂತಹ ಆಂದೋಲನಗಳಿಗೆ ಇಂಬು ದೊರೆಯುತ್ತದೆ. ಯಾವತ್ತೂ ಕ್ರಾಂತಿಯ ಪಂಜು ಹಿಡಿಯುವವರು ಹಿಡಿಮಂದಿ. ಆ ಪಂಜಿನ ಬೆಳಕು ಕಾಲಗಡಿಯಲ್ಲಿ ಇಡೀ ಸಮಾಜದ ಬೆಳಕಾಗಿ ಬೆಳಗುವುದು ನಿಶ್ಚಿತ.

## ಅಡಿಟಿಪ್ಪಣಿಗಳು

೧. ದೇಜಗೌ- ಹೊಯ್ಸಳೇಶ್ವರಿ ಶಾಂತಲಾ, ಪು. ೯೩.

೨. ದೇಜಗೌ - ಹರಳಯ್ಯ ವಿಜಯ - ಪು. ೭-೮

೩. ಅದೇ, ಪು. ೧೧-೧೨.

೪. ದೇಜಗೌ- ಹೊಯ್ಸಳೇಶ್ವರಿ ಶಾಂತಲಾ, ಪು. ೭೦

೫. ಅದೇ, ಪು. ೪೮.

೬. ದೇಜಗೌ - ಹರಳಯ್ಯ ವಿಜಯ, ಪು. ೬೨-೬೪.

೭. ದೇಜಗೌ- ಹೊಯ್ಸಳೇಶ್ವರಿ ಶಾಂತಲಾ, ಪು. ೧೭-೧೮.

೮. ಅದೇ, ೮೪

೯. ದೇಜಗೌ, ಹರಳಯ್ಯ ವಿಜಯ, ಪು. ೭೧.

೧೦. ಅದೇ, ಪು. ೯೩.

# ಅಧ್ಯಾಯ – ಆರು

## ಎರಡು ನಾಟಕಗಳ ಭಾಷೆ, ತಂತ್ರ ಮತ್ತು ಶೈಲಿ

ದೇಜಗೌರವರ 'ಹರಳಯ್ಯ ವಿಜಯ/ ಕ್ರಾಂತಿ ಕಹಳೆ' ಹಾಗೂ ಹೊಯ್ಸಳೇಶ್ವರ ಶಾಂತಲಾ ಐತಿಹಾಸಿಕ ನಾಟಕಗಳ ಸಾಲಿನಲ್ಲಿ ಕಂಡುಬರುವ ಎರಡು ಶ್ರೇಷ್ಠ ನಾಟಕಗಳಾಗಿವೆ. ಇಲ್ಲಿ ಭಾಷೆ, ತಂತ್ರ ಮತ್ತು ಶೈಲಿಗಳಿಂದ ನಾಟಕವು ಮತ್ತಷ್ಟು ಮೆರಗು ಪಡೆದುಕೊಂಡಿದೆ. ಇತಿಹಾಸದ ಪ್ರಸಿದ್ಧ ವಸ್ತುಗಳನ್ನು ಆರಿಸಿಕೊಂಡ ಲೇಖಕರು ತಮ್ಮದೇ ಆದ ವಿಶಿಷ್ಟ ಭಾಷೆ, ತಂತ್ರ ಹಾಗೂ ಶೈಲಿಯಿಂದ ನಾಟಕ ರಚಿಸಿದ್ದಾರೆ.

೧೨ನೇ ಶತಮಾನದ ಶರಣಕ್ರಾಂತಿ ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಕಂಡುಬರುವ ಒಂದು ಸಮಗ್ರ ಕ್ರಾಂತಿ. ಈ ನಾಟಕವು ಕ್ರಾಂತಿಯನ್ನು ಪ್ರತಿಬಿಂಬಿಸುವ ಒಂದು ದರ್ಪಣವಾಗಿದೆ. ಬಸವಣ್ಣನವರ ನೇತೃತ್ವದಲ್ಲಿ ಸಂಘಟಿತವಾದ ಒಂದು ಜಾತ್ಯಾತೀತ, ಆಂದೋಲನ ಕೇವಲ ಸಾಮಾಜಿಕ ಆಂದೋಲನ ಮಾತ್ರವಾಗಿರದೆ ಭಾಷಿಕ ಮತ್ತು ಧಾರ್ಮಿಕ ಆಂದೋಲನಗಳ ಒಂದು ಸಮುಚ್ಛಯ ರೂಪವನ್ನು ಪಡೆಯಿತು. ಬಸವಣ್ಣ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಸಿದ್ಧರಾಮಯ್ಯ, ಹರಳಯ್ಯ ಮುಂತಾದ ವಿಭೂತಿ ಶಕ್ತಿಗಳು ಈ ಆಂದೋಲನದ ಚಾಲನ ಶಕ್ತಿಗಳಾಗಿ ಕೆಲಸ ಮಾಡಿದ್ದು ಮಹತ್ವದ ಸಂಗತಿ. ಆ ದಿನಗಳಲ್ಲಿ ಬ್ರಾಹ್ಮಣ ಮದುವರಸರ ಮಗಳನ್ನು ದಲಿತ ಹರಳಯ್ಯನ ಮಗ ಶೀಲವಂತನಿಗೆ ಕೊಟ್ಟು ವಿವಾಹ ಮಾಡಿದ್ದು ಅದ್ಭುತ ಕ್ರಾಂತಿ ಮುಂದೆ ಇದು ಒಂದು ಸಾಮ್ರಾಜ್ಯವೇ ಅಲ್ಲೋಲ ಕಲ್ಲೋಲವಾಗಲು, ಚಕ್ರವರ್ತಿ ಬಿಜ್ಜಳನ ಕೊಲೆಯಾಗಲು, ಬಸವಣ್ಣನವರ ಬದುಕು ಅಂತ್ಯಕಾಣಲು ಕಾರಣವಾಯಿತು.

ದೇಜಗೌರವರು ತಮ್ಮ ಹರಳಯ್ಯ ವಿಜಯ ಮತ್ತು 'ಹೊಯ್ಸಳೇಶ್ವರಿ ಶಾಂತಲಾ' ಎರಡು ನಾಟಕಗಳಲ್ಲೂ ಒಳ್ಳೆಯ ಪಾತ್ರರಚನೆ ಮತ್ತು ಉತ್ತಮ ಸಂಭಾಷಣಾ ಶೈಲಿಯಿಂದ ಮನಂಬುಗುವಂತೆ ಚಿತ್ರಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಒಂದು ಸಂಪೂರ್ಣ ಕ್ರಾಂತಿ, ನಾಟಕ ರೂಪವನ್ನು ಪಡೆದಿದ್ದು ಇದೇ ಮೊದಲು ಎಂಬುದು ಗಮನಿಸಬೇಕಾದ ಅಂಶವಾಗಿದೆ. ಹರಳಯ್ಯ ವಿಜಯದಲ್ಲಿ ಅನುಭವ ಮಂಟಪದಲ್ಲಿನ ಶರಣರ ಸಂಭಾಷಣಾ ಶೈಲಿ ಮತ್ತು ಭಾಷಾ ಬಳಕೆಗೆ ಒಂದು ಉದಾಹರಣೆ

"**ಬಸವಣ್ಣ:** ಕಾಯದ ಲಜ್ಜೆಯ ಕಲ್ಪತವ ಕಳೆದು
ಜೀವದ ಲಜ್ಜೆಯ ಮೋಹವನಳಿದು
ಮನದ ಲಜ್ಜೆಯ ನೆನಹ ಸುಟ್ಟ

ಎನ್ನ ಹೆತ್ತ ತಾಯಿ ಮಹದೇವಿಯಕ್ಕನ
ನಿಲವ ನೋಡಯ್ಯ ಪ್ರಭುವೆ

ಮಹಾದೇವಿಯಕ್ಕ: ಅಣ್ಣ, ನಮ್ಮ ದಯೆಯಿಂದ ಪ್ರಭುವಿನ
ಹರಕೆಯಿಂದ
ಕಾಮನಂ ಗೆಲದೆ; ದೇಹಗುಣವ ಮರೆತು
ಪ್ರಾಣಲಂಗಿಯಾದೆ;
ಎರಡುವರಿಯದೆ ಚೆನ್ನಮಲ್ಲಕಾರ್ಜುನನ
ಕೂಡಿದೆನು
ವೇದಶಾಸ್ತ್ರಪುರಾಣಂಗಳೆಂಬುವ ಕೊಟ್ಟಣವ
ಕುಟ್ಟುತ್ತ ನುಚ್ಚು ತೌಡು ಕಾಣಿಭೋ
ಅವನ್ನು ಕುಟ್ಟಲೇಕೆ
(ಎಂದವಳು ಪ್ರಶ್ನಿಸುತ್ತಾಳೆ)[೧]

ಈ ಸಂಭಾಷಣೆಯಲ್ಲಿ ಉತ್ತಮ ಸ್ವಾರಸ್ಯದಿಂದ ಕೂಡಿದ ಅಂಶಗಳನ್ನು ಕಾಣಬಹುದು. ಸರಳ ಭಾಷೆಯಲ್ಲಿ ಉನ್ನತವಾದುದನ್ನು ಶರಣರ ಮೂಲಕ ಹೇಳಿಸುವ ಪ್ರಯತ್ನವನ್ನು ಲೇಖಕರು ಮಾಡಿದ್ದಾರೆ. ಪ್ರಾಸಬದ್ಧವಾದ ಪದ್ಯರೂಪದ ಈ ಸಂಭಾಷಣೆ ಉತ್ತಮ ಶೈಲಿಯನ್ನು ಹೊಂದಿದೆ.

ಕುವೆಂಪುರವರು ಕನ್ನಡ ಮತ್ತು ಕನ್ನಡ ನಾಡಿನ ಸಂಸ್ಕೃತಿಯ ಬಗೆಗೆ ಹೊಂದಿದ ಅಭಿಮಾನ, ಪ್ರೀತಿ ಹಾಗೂ ಕನ್ನಡದ ಸ್ಥಾನಮಾನಕ್ಕಾಗಿ ಅವರು ನಡೆಸಿಕೊಂಡು ಬಂದ ಹೋರಾಟ, ನಾಡಿನ ಪ್ರಾಮುಖ್ಯತೆಯನ್ನು ಅವರ ಶಿಷ್ಯರಾದ ದೇಜಗೌರವರು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಇವರು ಸಹ ಕನ್ನಡ ಕುರಿತು ಉಜ್ವಲವಾದ ಅಭಿಮಾನವನ್ನು ಹೊಂದಿ ಹಲವು ಹೋರಾಟ, ಸತ್ಯಾಗ್ರಹ ಹಾಗೂ ಉಪವಾಸ ಸತ್ಯಾಗ್ರಹಗಳನ್ನು ಮಾಡಿರುವರು. ದೇಜಗೌರವರ ಕನ್ನಡ ಹಾಗು ಕನ್ನಡಾಂಬೆಯ, ಭಾರತಮಾತೆಯ ಅಭಿಮಾನವನ್ನು ತಮ್ಮ ಬರವಣಗೆಯಲ್ಲೂ ತಂದಿದ್ದಾರೆ.

"ಭರತಮಾತೆ; ಇಂತಪ್ಪ ಹೆಣ್ಣಿನಂ ಧನ್ಯಮಾಯ್ತಿಳೆಯು
ಧನ್ಯಮಾಯ್ತು ಕನ್ನಡನಾಡು!

ಭುವನೇಶ್ವರಿ: ಧನುರ್ವಿದ್ಯೆ ಮೊದಲ್ಗೊಂಡು ಶಾಂತಲೆಯಾ
ಸಕಲಕಲಾ ಪ್ರದರ್ಶನಂ ನಡೆದಿದೆಯಮ್ಮ
ಮಾಳಗೂರಿನ ಹೊರವಳಯರ ಹಸಿರು ಚಪ್ಪರದಲ್ಲಿ

ವಿಷ್ಣುವರ್ಧನನುಂ ನೆರೆಹೊರೆಯ ಸಾಮ್ರಾಟರೈತಹರು
ರಾಷ್ಟ್ರಮಾತೆಯು ನೀನು, ಭಾಗ್ಯದಾತೆಯು ನೀನು
ಸರ್ವಜ್ಞೆ, ಸರ್ವಶಕ್ತಿ, ಸರ್ವಂಸಹೆ, ಜನನಿ ನೀನು
ಅಶರೀರಿಯಾಗಿ ಪ್ರದರ್ಶನವ ನೋಡಿ ಹರಸಮ್ಮ

ಭರತಮಾತೆ: ತಥಾಸ್ತು ಮಗಳೆ"[೨]

ನಾಟಕದ ಆರಂಭದಲ್ಲಿನ ಲೇಖಕರ ಕಲ್ಪನೆ ಅದ್ಭುತವಾದುದು. ಕನ್ನಡತನದ ಹಿರಿಮೆಗರಿಮೆಯನ್ನು ಪರಿಸರದ ಮಹತ್ವವನ್ನು ಭಾರತಾಂಬೆಯ ವಿಶ್ವತಾಯ್ತನವನ್ನು ನಾಟಕದ ಆರಂಭದಲ್ಲೇ ಸೂಚ್ಯವಾಗಿ ಹೇಳಿದ್ದಾರೆ. ಇಲ್ಲಿ ಹಳಗನ್ನಡ ಭಾಷೆಯನ್ನು ಬಳಸಿಕೊಂಡು ಈ ದೃಶ್ಯ ರಚಿಸಿದ್ದಾರೆ. ಇವರ ಈ ಶೈಲಿ ಕನ್ನಡ ಪ್ರಜ್ಞೆಯನ್ನು ತಿಳಿಸುತ್ತದೆ. ಕುವೆಂಪುರವರ ಆಲೋಚನೆಯಂತೆ ಕನ್ನಡವನ್ನು ಕಟ್ಟುವ ಮತ್ತು ಬೆಳೆಸುವ ಕೆಲಸವನ್ನು ದೇಜಗೌರವರು ಜವಾಬ್ದಾರಿಯುತವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಈ ಕಾರ್ಯ ದೇಜಗೌರವರ ಕನ್ನಡ ಕಾರ್ಯವ್ಯಾಪ್ತಿ, ಕನ್ನಡ ಕ್ಷೇತ್ರ ಚಳುವಳಿ ಅಥವಾ ಕನ್ನಡ ಪ್ರಚಾರಕ್ಕೆ ಮಾತ್ರ ಸೀಮಿತವಾಗಿಲ್ಲ ಅದರ ವ್ಯಾಪ್ತಿ ಕೃತಿ ರಚನೆಯಲ್ಲಿಯೂ ಯಥೇಚ್ಛವಾಗಿದೆ ಎಂಬುದನ್ನು ಅವರ ಇನ್ನಿತರ ಕೃತಿಗಳನ್ನು ಸೇರಿಸಿದಂತೆ ತಿಳಿದುಕೊಳ್ಳಬಹುದಾಗಿದೆ.

ದೇಜಗೌರವರು ತಮ್ಮ ದೂರದೃಷ್ಟಿಯ ಫಲವಾಗಿ, ತಮ್ಮ ಅನುಭವ, ಆಲೋಚನೆಯಿಂದಾಗಿ ನಾಟಕದಲ್ಲಿ ಹಲವು ಆಕರ್ಷಕ ಸನ್ನಿವೇಶಗಳನ್ನು ತಂದಿದ್ದಾರೆ. ಇಲ್ಲಿನ ಭಾಷೆ ಮತ್ತು ಶೈಲಿಯಿಂದ ಇಡೀ ನಾಟಕ ತಾನಾಗಿಯೇ ಓದಿಸಿಕೊಂಡು ಹೋಗುತ್ತದೆ. ಕಾರಣ ಇಲ್ಲಿ ಉತ್ತಮ ಬರವಣಿಗೆಯ ಧಾಟಿಯಿದೆ.

ದೇಜಗೌರವರ 'ಹರಳಯ್ಯ ವಿಜಯ' ನಾಟಕದಲ್ಲಿ ಕಂಡುಬರುವ ಮತ್ತೊಂದು ಆಕರ್ಷಣೀಯ ಶೈಲಿಯೆಂದರೆ, ಪಾತ್ರಗಳ ಮೂಲಕ ವಚನಗಳನ್ನು ಹೇಳಿಸುವಂತಹುದು ಇದು ಲೇಖಕರ ವಾಸ್ತವ ಪ್ರಜ್ಞೆಯ ದ್ಯೋತಕ; ಇದರಿಂದ ನಾಟಕದಲ್ಲಿ ನೈಜತೆ ಮೂಡಿಬರುತ್ತದೆ.

ಸಂಭಾಷಣೆಯಲ್ಲಿ ವಚನಗಳ ಬಳಕೆ ಹೆಚ್ಚು ವಾಸ್ತವಾಂಶಗಳಿಂದ ಕೂಡಿವೆ. ಇದಕ್ಕೊಂದು ಉದಾಹರಣೆ

"ಹರಳಯ್ಯ : ವಾಗ್ದಾನವೇ? ಉಂಟೆ, ಉಂಟೆ ನಿಮ್ಮಂಥ ಶರಣ ಶ್ರೇಷ್ಠರಿಗೆ । ಏನದು?

ಮದುವರಸ : ನಿಮ್ಮ ಮಗ ಶೀಲವಂತಯ್ಯನಿಗೆ ನನ್ನ ಮಗಳನ್ನು ಮದುವೆಮಾಡಿಕೊಡಬೇಕೆಂದು ನನ್ನಾಸೆ

ಹರಳಯ್ಯ : ಶಿವಾ ಶಿವಾ। ಎತ್ತಣ ಮಾಮರ, ಎತ್ತಣ ಕೋಗಿಲೆ
ಎತ್ತಣಿಂದೆತ್ತಣ ಸಂಬಂಧವಯ್ಯ ನೀವು
ಬ್ರಾಹ್ಮಣರು........"[೩]

ಇದು ದೇಜಗೌರವರು ಸೂಕ್ಷ್ಮ ಪ್ರಜ್ಞೆ ಹಾಗು ಜ್ಞಾನ ಸಂಪತ್ತನ್ನು ಪಡೆದವರು ಎಂಬುದಕ್ಕೆ ಅವರ ನಾಟಕದ ಇಂತಹ ಉದಾಹರಣೆ ಗಮನಿಸಿದಾಗ ತಿಳಿಯುವಂತಹುದು. ಅಂದರೆ "ಎತ್ತಣಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತಣ ಸಂಬಂಧವಯ್ಯಾ" ಈ ವಚನದ ಮೂಲ ಕರ್ತೃ ಅಲ್ಲಮಪ್ರಭು. ಆದರೆ ಲೇಖಕರು ಇದೇ ವಚನವನ್ನು ಹರಳಯ್ಯನಿಂದ ಹೇಳಿಸಿದ್ದಾರೆ. ಇದು ನಾಟಕಕಾರರ ಸಮಯಪ್ರಜ್ಞೆ ಹಾಗೂ ಔಚಿತ್ಯಪ್ರಜ್ಞೆಗೆ ಹಿಡಿದ ಕನ್ನಡಿಯಂತಿದೆ.

ವಚನಗಳನ್ನು ಸೂಕ್ತವಾಗ ಬಳಸಿ ಪಾತ್ರಗಳ ಮೂಲಕ ಸನ್ನಿವೇಶಕ್ಕೆ ತಕ್ಕಂತೆ ಅಲ್ಲಿನ ಸಂಭಾಷಣೆಯಲ್ಲಿ ಬಳಸಬಹುದು ಎಂಬುದನ್ನು ಹರಳಯ್ಯ ವಿಜಯ ನಾಟಕದ ಮೂಲಕ ತಿಳಿದುಬರುತ್ತದೆ. ಈ ನಾಟಕದಲ್ಲಿ ಇನ್ನು ಹಲವು ಕಡೆ ಈ ರೀತಿಯ ಶೈಲಿಯನ್ನೇ ಬಳಸಿರುವುದು ಕಂಡುಬರುತ್ತದೆ.

'ಹರಳಯ್ಯ ವಿಜಯ' ನಾಟಕದ ಮತ್ತೊಂದು ಸನ್ನಿವೇಶದಲ್ಲಿ ಲೇಖಕರು ಬಸವಣ್ಣನವರ ವಚನವನ್ನು ಅವರಿಂದಲೇ ಸಂದರ್ಭಕ್ಕೆ ತಕ್ಕಂತೆ ಆಡಿಸಿರುವುದು ಕಾಣಸಿಗುತ್ತದೆ.

"ಮಾದರಸ : ಹೌದು ಮಗನೆ, ನೀನು ದೂರ ದೂರಿಗೆ
ಹೋದ ನಂತರ ನಮ್ಮ ಪ್ರಾಣಗಳು ನಿನ್ನನ್ನೇ
ಹಿಂಬಾಲಿಸುತ್ತವೆ.

ಬಸವಣ್ಣ : ಅಪ್ಪ, ಅಮ್ಮ ನನ್ನನ್ನು ನಿಮ್ಮನ್ನು, ಇಡೀ
ಲೋಕವನ್ನು ರಕ್ಷಿಸುವಾತ ಶಿವ ಅವನನ್ನು
ನಂಬಿಕೊಂಡರೆ ದುಃಖದೂರವಾಗುತ್ತದೆ.

ನೀನೊಲಿದೊಡೆ ಕೊರಡು ಕೊನರುವುದಯ್ಯ
ನೀನೊಲಿದೊಡೆ ಬರಡು ಹಯನಹುದಯ್ಯ
ನೀನೊಲಿದೊಡೆ ವಿಷವಮೃತವಹುದಯ್ಯ
ನೀನೊಲಿದೊಡೆ ಸಕಲ ಪಡಿಪದಾರ್ಥ
ಇದಿರಲ್ಲಿರ್ಪುವು, ಕೂಡಲಸಂಗಮದೇವಾ

ಶಿವ ಮತ್ತು ಗುರುವನ್ನು ನಂಬಿದವರಿಗೆ ಶಾಶ್ವತ ಸುಖಲಭಿಸುತ್ತದೆ. ಅಪ್ಪ, ಅಮ್ಮ ನಿಮ್ಮ ಕಾಲುಹಿಡಿದು ಬೇಡಿಕೊಳ್ಳುತ್ತೇನೆ. ಅಳಬೇಡಿ ಚಿಂತಿಸಬೇಡಿ ನನ್ನನ್ನು ಹರಸಿ ಕಳಿಸಿಕೊಡಿ"[೪]

ಹೀಗೆ ಲೇಖಕರು ವಿಭಿನ್ನ ಮನೋಭಾವ, ಶೈಲಿಗಳನ್ನು ಹೊಂದಿದವರು ಎಂಬುದಕ್ಕೆ ಮೇಲಿನ ಎರಡು ಉದಾಹರಣೆಗಳನ್ನು ಗಮನಿಸಬಹುದು. ಎರಡು ಸಹ ಸಮಂಜಸವಾಗಿ ಕಂಡುಬರುತ್ತವೆ.

ನಾಟಕದಲ್ಲಿ ತಂತ್ರ ಬಹಳ ಮುಖ್ಯವಾಗಿರುವಂತಹುದು. ನಾಟಕದಲ್ಲಿನ ಸನ್ನಿವೇಶಗಳಿಗೆ ಸಂಬಂಧವನ್ನು ಬೆಸೆಯುವ ಕೊಂಡಿ ಈ ತಂತ್ರವಾಗಿದೆ. ಒಂದು ಕಾರ್ಯದ ಯಶಸ್ಸಿಗೆ ತಂತ್ರವನ್ನು ಬಳಸುತ್ತೇವೆ. ಅದು ಸಾಧಕವೂ ಆಗಬಹುದು ಬಾದಕವೂ ಆಗಬಹುದು. ಪ್ರಸ್ತುತ ರಾಜಕೀಯ ದುರೀಣರು ಒಂದು ಪಕ್ಷದಿಂದ ಮತ್ತೊಂದು ಪಕ್ಷಕ್ಕೆ ಜಿಗಿಯುವಾಗ ಹಾಗು ವಿರೋಧ ಪಕ್ಷದ ಅಭ್ಯರ್ಥಿಯನ್ನು ಕೆಳಗಿಳಿಸಿ ಆ ಗದ್ದುಗೆ ಮೇಲೆ ತಾವು ಕೂರುವ ಸಮಯದಲ್ಲಿ ಇದೇ ತಂತ್ರವನ್ನು ಬಳಸಿಕೊಂಡಿದ್ದಾರೆ.

"ಲಕ್ಷ್ಮಿ : ನಿಮ್ಮ ಈ ದುಸ್ಸಾಹಸ ನನಗೇಕೋ ಭಯವುಂಟುಮಾಡುತ್ತದೆ ಅಪ್ಪಾಜಿ

ಪೆರು : ನಾನಿದ್ದೀನಿ ನೀನು ಹೆದರಬೇಡ, ಮಗು ನಿನ್ನ ಮತ್ತು ನಿನ್ನ ಮಗನ ಅಭ್ಯುದಯಕ್ಕಾಗಿ ಈ ಸಾಹಸ, ಜಗತ್ತಿರುವುದೇ ಬಲಿಷ್ಠರಿಗಾಗಿ, ಸಾಹಸಿಗರಿಗಾಗಿ, ನಿಷ್ಕ್ರೀಯವಂತರಿಗಲ್ಲ. ನಿನ್ನ ಮೇಲೆ ಯಾವ ಆಪಾದನೆಯು ಬರದಂತೆ ನಾನು ನೋಡಿಕೊಳ್ಳುತ್ತೇನೆ.

ಲಕ್ಷ್ಮಿ : ಇದೆಲ್ಲ ಮೋಸವಲ್ಲವೆ?

ಪೆರು : ಮೋಸವೂ ಒಂದು ರಾಜಕೀಯ ತಂತ್ರವಮ್ಮ

ಲಕ್ಷ್ಮಿ : ಏನೋ ಅಪ್ಪ ನನ್ನೆಲ್ಲ ಸಂಶಯಗಳಿಗೂ ನಿಮ್ಮಲ್ಲಿ ಉತ್ತರವಿದೆ. ನನಗೇನೂ ತಿಳಿಯುವುದಿಲ್ಲ, ನಾಟಕ ಮುಂದುವರಿಯಲಿ"[೫]

ಸುಪ್ತ ಮನಸ್ಸಿನ ಲೇಖಕರು ಈ ಅಂಶಗಳನ್ನು, ಪ್ರಸ್ತುತ ರಾಜಕೀಯ ಡಾಂಬಿಕತೆಯನ್ನು ಗಮನದಲ್ಲಿರಿಸಿಕೊಂಡೆ ಈ ಸನ್ನಿವೇಶ ಚಿತ್ರಿಸಿದ್ದಾರೆ. ರಾಜಕೀಯದ ನಾಟಕೀಯ ಬೆಳವಣಿಗೆಗೆ ಮಂತ್ರಿಗಳು ಮಾಡುವ ಕುತಂತ್ರಗಳಿಗೆ ಇದು ಉತ್ತಮ ಉದಾಹರಣೆ. ದೇಜಗೌರವರು ತಮ್ಮ ನಾಟಕಗಳಲ್ಲಿ ಕಂಡುಬರುವ ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಕುತಂತ್ರಿಗಳು ಮೊದಲೇ ಮಾಡಿದ ತಂತ್ರದಂತೆ ಎಲ್ಲವೂ ಸಾಂಗವಾಗಿ ನಡೆಯಲು ಮಾಡಿಕೊಂಡ ಕುತಂತ್ರದ ಸಂದರ್ಭ ಹೀಗಿದೆ.

"ನಾರಾಯಣ : ಬಸವಣ್ಣನೊಬ್ಬನಿಂದಲೇ ದೇಶದ ರಥ ನಡೆಯುತ್ತಿರಲಿಲ್ಲ ಪ್ರಭು, ಯಾರಿಲ್ಲದಿದ್ದರೂ ಕಾರುಬಾರು ನಡೆಯುತ್ತವೆ. ಪ್ರಭುಗಳೊಬ್ಬರಿದ್ದರೆ ಸಾಕು. ಆಡಳಿತ ಕುಸಿಯದಿರಲು ಮಹಾಮಾತ್ಯರ ಅಗತ್ಯವಿದೆ. ಜೇಷ್ಠರೂ ಅನುಭವಿಗಳೂ ಆದ ಮಂಚಣ್ಣನವರು ಆ ಜಾಗಕ್ಕೆ ಬಂದರೊಳ್ಳೆಯದು.

ಬಿಜ್ಜಳ : (ಅನ್ಯಮನಸ್ಕನಾಗಿ) ಆಗಲಿ

ಮಂಚಣ್ಣ : ನಾಳೆ ಬೆಳಗ್ಗೆ ಮಂತ್ರಿಮಂಡಲದ ಸಭೆ ಸೇರಿ ಮುಂದಿನ ಕಾರ್ಯಭಾರವನ್ನು ನಿರ್ಣಯಿಸಬಹುದು ಪ್ರಭು"[೬]

ಮೇಲಿನ ಸಂದರ್ಭ ಪೂರ್ವಯೋಜಿತವಾಗಿದ್ದು ಮುಂದೆ ಅದೇ ರೀತಿ ಕಾರ್ಯ ಚಟುವಟಿಕೆಗಳು ನಡೆಯುತ್ತವೆ. ಇಲ್ಲಿ ಯಾವ ಕಡೆಯಲ್ಲೂ ಲೋಪಗಳನ್ನು ಹುಡುಕಲು ಸಾಧ್ಯವಿಲ್ಲ. ಅಂದರೆ ಪಾತ್ರ, ಸ್ನನ್ನಿವೇಶ, ನಿರೂಪಣೆ, ತಂತ್ರಾಂಶ ಯಶಸ್ವಿಯಾಗಿ ಬಂದಿದೆ. ಇದು ಲೇಖಕರ ಉತ್ತಮ ಕುಸುರಿ ಕೆಲಸಕ್ಕೆ ಉದಾಹರಣೆ ಅವರ ಮೇಲಿನೆರಡು ನಾಟಕಗಳಲ್ಲಿ ಇಂತಹ ಸನ್ನಿವೇಶಗಳಿವೆ.

ಹೀಗೆ ಲೇಖಕರು 'ಹರಳಯ್ಯವಿಜಯ' ಮತ್ತು 'ಹೊಯ್ಸಳೇಶ್ವರಿ ಶಾಂತಲಾ' ನಾಟಕಗಳೆರಡರಲ್ಲೂ ಸರಳವೂ, ಸಹಜವೂ ಆದ ಭಾಷೆ, ಉತ್ತಮ ಶೈಲಿ ಹಾಗು ತಂತ್ರವನ್ನು ಅಳವಡಿಸಿಕೊಂಡು ಯಶಸ್ವಿಯಾದ ಐತಿಹಾಸಿಕ ನಾಟಕಗಳನ್ನು ರಚಿಸಿದ್ದಾರೆ. ಭಾಷೆಯಲ್ಲಿ ಕಾವ್ಯಸೌಂದರ್ಯವೂ, ವಾಸ್ತವಿಕಾಂಶವೂ ಬಂದಿದೆ. ಜೊತೆಗೆ ದರ್ಶನಾಂಶಗಳನ್ನು ಕಾಣಬಹುದು.

ಈ ನಾಟಕಗಳೆರಡು ದಾರ್ಶನಿಕ, ಧಾರ್ಮಿಕ ಹಾಗು ಕ್ರಾಂತಿಯ ಅಂಶಗಳಿಂದ ಕೂಡಿದೆ. ಅಲ್ಲದೆ ಜಾತ್ಯಾತೀತ ಧೋರಣೆ ಇಲ್ಲಿ ಮಡುಗಟ್ಟಿ ನಿಂತಿದೆ. ನಾಟಕದಲ್ಲಿ ಸಂವಿಧಾನ, ಪಾತ್ರರಚನೆ, ರಂಗಭೂಮಿ ಯಶಸ್ಸಿಗೆ ಪೂರಕವಾಗಿ ನಿರ್ಮಿತವಾಗಿದೆ.

## ಅಡಿಟಿಪ್ಪಣಿಗಳು

೧. ದೇಜಗೌ, ಹರಳಯ್ಯ ವಿಜಯ, ಪು. ೬೧.

೨. ದೇಜಗೌ, ಹೊಯ್ಸಳೇಶ್ವರಿ ಶಾಂತಲಾ, ಪು. ೪.

೩. ದೇಜಗೌ, ಹರಳಯ್ಯ ವಿಜಯ, ಪು. ೫೨.

೪. ಅದೇ, ಪು. ೨೪-೨೫.

೫. ದೇಜಗೌ, ಹೊಯ್ಸಳೇಶ್ವರಿ ಶಾಂತಲಾ, ಪು. ೯೨.

೬. ಅದೇ, ಪು. ೮೮-೮೯

## ಅಧ್ಯಾಯ – ಏಳು

# ಸಮಕಾಲೀನ ಮತ್ತು ಚಾರಿತ್ರಿಕವಾಗಿ ಎರಡು ನಾಟಕಗಳ ಪ್ರಸ್ತುತತೆ

ಇಂದು ಸಮಾಜದಲ್ಲಿ ಹಲವು ಧರ್ಮಗಳಿವೆ. ಆ ಧರ್ಮಗಳಲ್ಲೂ ಹಲವು ಜಾತಿ ಮತ್ತು ಉಪಜಾತಿಗಳು ಸೇರಿವೆ. ಒಂದು ಜಾತಿಯವರು ಮತ್ತೊಂದು ಜಾತಿಯವರ ಮೇಲೆ ದ್ವೇಷ, ಅಸೂಯೆಯಿಂದಿರುವುದು, ಒಂದು ಒಳ ಪಂಗಡ ಇನ್ನೊಂದು ಒಳ ಪಂಗಡದ ಮೇಲೆ ಹಗೆತನದಿಂದಿರುವುದು, ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಧರ್ಮಗುರುಗಳು ಮಠಗಳನ್ನು ಕಟ್ಟಿಕೊಂಡು ತಮ್ಮ ಅನುಯಾಯಿಗಳನ್ನು ನಿಯಂತ್ರಿಸುವುದು, ರಾಜಕೀಯ ಮುಖಂಡರು ತಮ್ಮ ಜಾತಿಯವರನ್ನು ಗುಂಪು ಕಟ್ಟಿಕೊಂಡು ಅಧಿಕಾರದ ಆಸೆಗೆ ದೊಂಬಿ ನಡೆಸುವುದು; ಇದರಿಂದ ತಮ್ಮ ಹಿತಾಸಕ್ತಿ ಬಯಕೆಗಳನ್ನು ತೀರಿಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಧರ್ಮಗಳು ಜಾತಿಗಳು ಮತ್ತು ಅವುಗಳ ಒಳಪಂಗಡಗಳೆನ್ನದೆ ಸಮಸ್ತ ಬಡವರ ಪರವಾಗಿ ನ್ಯಾಯ ಇರಬೇಕೆಂಬುದು ದೇಜಗೌರವರು ತಮ್ಮ ನಾಟಕಗಳಲ್ಲಿ ಪ್ರತಿಬಿಂಬಿಸಿದ ನಿಲುವಾಗಿದೆ. ಅಲ್ಲದೆ ಕಾಲಾತೀತ ಮತ್ತು ಲೋಕಾತೀತವಾದ ನಿಲುವನ್ನು ಪ್ರಸ್ತುತ ಸಂದರ್ಭದಲ್ಲಿ ನಾಟಕಗಳೆರಡರಲ್ಲೂ ಗ್ರಹಿಸಬಹುದಾಗಿದೆ.

ಇಂದು ಸಮಾಜದಲ್ಲಿ ಶೋಷಣೆ ಹಲವು ಪ್ರಕಾರದಲ್ಲಿ ನಡೆಯುತ್ತಿದೆ. ಉಳ್ಳವರು ನಿರ್ಗತಿಕರ ಮೇಲೆ, ಉನ್ನತ ಜಾತಿಯವರು ಕೀಳು ಜಾತಿಗಳ ಮೆಲೆ ನಿರಂತರ ಶೋಷಣೆ ನಡೆಸುತ್ತಾ ಬಂದಿದ್ದಾರೆ. ನಮ್ಮ ಸಮಾಜದಲ್ಲಿ ಶೋಷಿತರು ಇಂದಿನವರೆಗೂ ಶೋಷಣೆಗೆ ಒಳಗಾಗುವುದೇ ಆಗಿದೆ. ಅವರು ತಮ್ಮ ಹಕ್ಕು ಬಾದ್ಯತೆಗಾಗಿ ದಿಟ್ಟ ನಿಲುವನ್ನು ಸಾಧಿಸಬೇಕಾಗಿದೆ. ಮಾರ್ಕ್ಸ್‌ನ ಕನಸಿನ ಸಮಾಜವನ್ನು ನಿರ್ಮಿಸಲು ಎಲ್ಲರೂ ಒಂದುಗೂಡಬೇಕಾಗಿದೆ. ಅವರ ಕನಸಿನ ಸಮಾಜ ನಿರ್ಮಿತವಾದುದೇ ಆದಲ್ಲಿ ಗಾಂಧೀಜಿಯವರ ರಾಮರಾಜ್ಯದ ಕಲ್ಪನೆ ನನಸಾದಂತಾಗುವುದು.

ನಮ್ಮಲ್ಲಿರುವ ಕೀಳರಿಮೆಯೇ ನಾವು ಹಿಂದುಳಿಯಲು ಕಾರಣವಾಗಿದೆ. ಜಡತ್ವದ ಜಾತ್ಯಾಂದತೆಯನ್ನು ಹೊರತಳ್ಳಲು ಎಲ್ಲರೂ ಮುಂದಾಗಬೇಕಾಗಿದೆ. ಶರಣರ ತತ್ವಗಳನ್ನು ಸಿದ್ಧಾಂತಗಳನ್ನು ಜೀವನ ಕ್ರಮವಾಗಿ ಅನುಸರಿಸಬೇಕಾಗಿದೆ. ಹರಳಯ್ಯನ ವಿಜಯದ ಈ ಸಂದರ್ಭ ಇಂದು ಅವಶ್ಯವಾಗಿ ಎಲ್ಲರೂ ಅರಿಯಬೇಕಾಗಿದೆ.

"ಅಂಬಿಗರ ಚೌಡಯ್ಯ:

ಹೊಲೆ ಹೊಲೆಯ ಎಂದರೆ

ಹೊಲೆಯರೆಂತಪ್ಪರಯ್ಯ?

ಹೊಲೆಯ ಹೊರಕೇರಿಯಲ್ಲಿರುವ ಊರೊಳಗಿಲ್ಲವೆ?
ತಾಯಿಗೆ ಉತ್ತರ ಕೊಟ್ಟವನೆ ಹೊಲೆಯ
ನಡುದಾರಿಗೆ ಮುಳ್ಳು ಹಚ್ಚಿದವನೆ ಹೊಲೆಯ
ಚಿತ್ತದಲ್ಲಿ ಪರ ಸತಿಯ ಬಯಸಿದವನೇ ಹೊಲೆಯ
ಹತ್ತು ಆಡಿದರೆ ಒಂದು ನಿಜವಲ್ಲದವನೆ ಹೊಲೆಯ
ಇಂತಪ್ಪ ಹೊಲೆಯರು ಊರತುಂಬ ಇರಲಾಗಿ
ಹೊರಕೇರಿಯವರಿಗೆ ಹೊಲೆಯರೆನಬಹುದೇ?
ನನ್ನ ಕುಲ ಹೆಚ್ಚು, ನಿನ್ನ ಕುಲ ಕಡಿಮೆ ಎಂದು
ಬಡಿದಾಡುವ ಕುನ್ನಿನಾಯಿಗಳ ಮೋರೆಯ ಮೇಲೆ
ಪಟಪಟನೆ ಹೊಡೆಯಬಾರದೇ"[೧]

ಮೇಲಿನ ಮಾತು ಪ್ರಸ್ತುತವಾಗಿ ಅಕ್ಷರಸಹ ಅನ್ವಯವಾಗುವಂತದ್ದು ಇಂದಿಗೂ ಸಹ ಊರ ಹೊರಗೆ ಹೊಲಗೇರಿಗಳು ಇರುವುದನ್ನು ಗಮನಿಸಬಹುದು. ಹಾಗಾದರೆ ಊರೊಳಗಿನವರೆಲ್ಲ ಶುಭ್ರಮನಸ್ಕರೆ ಎಂದು ಪ್ರಶ್ನಿಸಿದಾಗ ಅಂಬಿಗರ ಚೌಡಯ್ಯನ ಮೇಲಿನ ಸಾಲುಗಳಲ್ಲಿ ಉತ್ತರವನ್ನು ಕಾಣಬಹುದಾಗಿದೆ. ಕಾಯಕ ಯಾವುದಾದರೇನು ನಾವು ಮಾಡುವ ಕೆಲಸದಲ್ಲಿ ನಿಷ್ಠೆ, ನಿಸ್ವಾರ್ಥ ಭಾವನೆಯಿದ್ದರೆ ಅದೇ ನಿಜವಾದ ದೈವಸಮಾನ ಕಾರ್ಯವಾಗುವುದು. ಹಿಂದಿನಿಂದಲೂ ವೃತ್ತಿಗನುಸಾರ ಗೌರವ ಮನ್ನಣೆ ಸಿಗುತ್ತಿತ್ತು.

ಈ ಕ್ರಮ ಇಂದಿಗೂ ಮುಂದುವರಿಯುತ್ತಿರುವುದು ವಿಷಾದದ ಸಂಗತಿ. "ಮನುಷ್ಯ ಜಾತಿ ತಾನೊಂದೇ ವಲಂ" ಎಂದು ಪಂಪ ಹಿಂದೆಯೇ ಹೇಳಿದರು ಅವನ ಉದ್ದೇಶವೂ ಬೇರೆಯದೇ ಆಗಿತ್ತು. ಆತನು ಸಹ ಎಲ್ಲ ಜಾತಿಗಳಲ್ಲೂ ಶ್ರೇಷ್ಠ ಜಾತಿ ಬ್ರಾಹ್ಮಣಜಾತಿ ಹಾಗೂ ಕ್ಷತ್ರಿಯ, ವೈಶ್ಯ, ಶೂದ್ರರನ್ನು ಗುರುತಿಸಿ ಅವರವರ ವರ್ಣಾನ್ವಯ ವೃತ್ತಿಗಳನ್ನು ಹೇಳಿರುವುದನ್ನು ಗಮನಿಸಬಹುದಾಗಿದೆ. ಹಾಗಾಗಿ ಜಾತಿ, ಧರ್ಮದ ಕಲ್ಪನೆ ೧೦ ನೇ ಶತಮಾನದಲ್ಲಿಯ ಕವಿಗಳಲ್ಲಿಯೂ ಇರುವುದು ಬೆಳಕಿಗೆ ಬರುತ್ತದೆ. ಆದರೆ ಅದಕ್ಕೆ ವಿರುದ್ಧವಾಗಿ ೧೨ನೇ ಶತಮಾನದ ಬಸವಣ್ಣ ನಮಗೆ ಪ್ರಸ್ತುತವಾಗುತ್ತಾರೆ. ಅವನ ತತ್ವಗಳೇ ನಮಗೆ ಆದರ್ಶವಾಗುತ್ತದೆ. ಇಂದಿಗೂ ಸಹ ನಮ್ಮ ನಡುವೆ ಈ ವಿಷಯದಲ್ಲಿ ಗಟ್ಟಿಯಾಗಿ ಉಳಿದುಕೊಂಡವರು ಬಸವಣ್ಣ ಮತ್ತು ಕುವೆಂಪು ಮುಂದೆಯೂ ಸಹ ಇಂತಹ ವ್ಯಕ್ತಿಗಳು ಶಾಶ್ವತವಾಗಿ ಚರಿತ್ರೆಯಲ್ಲಿ ಉಳಿಯುತ್ತಾರೆ.

ಹರಳಯ್ಯ ನಮಗಿಂದು ಪ್ರಸ್ತುತವಾಗುವುದು ಅವನು ಅನುಸರಿಸಿದ ಮಾರ್ಗ ಮತ್ತು ದೃಢ ಸಂಕಲ್ಪದಿಂದ ಕೀಳು ಜಾತಿಯವನಾದರೂ ಸಹ ಬಸವಣ್ಣ, ಅಲ್ಲಮರ

ಅನುಭವ ಮಂಟಪ ಸೇರಿ ಸ್ಥಾನಮಾನಗಳನ್ನು ಗಳಿಸಿಕೊಂಡನು. ಈ ಮಾರ್ಗ ಅನುಸರಣೀಯವಾದುದಾಗಿದೆ. ಕಾಯಕವನ್ನು ಶಿರಸಾವಹಿಸಿ ಮಾಡಿದವನೀತ. ಇವನಲ್ಲಿ ಯಾವುದೇ ಕೀಳರಿಮೆ ಇರಲಿಲ್ಲ.

"ಹರಳಯ್ಯ : ಧರ್ಮಕ್ಕೂ ಕಸುಬಿಗೂ ಸಂಬಂಧವಿಲ್ಲ ಪ್ರಭು
ಇನ್ನು ಮೇಲೆ ಇನ್ನೂ ಪಸಂದವಾಗಿ ನಮ್ಮ ಕಸುಬನ್ನು
ನಿರ್ವಹಿಸುತ್ತೇವೆ. ಈ ತನಕ ಯಾವ ರಾಜ
ಮಹಾರಾಜರಿಗೂ ನಮ್ಮ ಮೇಲೆ ಕನಿಕರ ಬರಲಿಲ್ಲ
ನಮ್ಮನ್ನು ನಾಯಿಗಿಂತ ಕಡೆಯಾಗಿ ಕಂಡಿರಿ ನಾವು
ಮನುಷ್ಯರೆಂಬುದನ್ನು ನಮಗೆ ತೋರಿಸಿಕೊಡಲು
ಬಸವೇಶ್ವರರು ಬರಬೇಕಾಯ್ತು, (ಸಭೆಯಲ್ಲಿ ಚಪ್ಪಾಳೆ)"[೨]

ಇಂತಹ ಹರಳಯ್ಯನ ನಿಲುವು ಇಂದು ಪ್ರತಿಯೊಬ್ಬ ಶೋಷಿತರಲ್ಲೂ ಬರಬೇಕು. ತಾವು ಮಾಡುವ ಕಾಯಕದಲ್ಲಿ ನಿಷ್ಠೆ ಇಡಬೇಕು.

ಚಾರಿತ್ರಿಕವಾಗಿ ಮಹತ್ವದ ನಾಟಕವಾಗಿರುವ 'ಹೊಯ್ಸಳೇಶ್ವರಿ ಶಾಂತಲಾ' ಪ್ರಸ್ತುತವಾಗಿ ನಮಗೆ ಹಲವು ಮಹತ್ವದ ಅಂಶಗಳನ್ನು ತಿಳಿಸಿಕೊಡುತ್ತದೆ. ನಮ್ಮ ಪೂರ್ವಜರ ಬದುಕನ್ನು ಕಲೆ ಸಾಹಿತ್ಯವನ್ನು ದೇಜಗೌರವರು ಸೂಕ್ಷ್ಮವಾಗಿ ಸೆರೆಹಿಡಿದಿದ್ದಾರೆ.

ಇಂದಿಗೂ ಸಹ ನಮ್ಮ ಸ್ತ್ರೀ ಅಸಮಾನತೆ ಕಂಡುಬರುತ್ತಿದೆ. ಹೆಣ್ಣನ್ನು ಅಬಲೆಯೆಂದು ಪುರುಷರು ಶೋಷಿಸುತ್ತಿರುವುದನ್ನು ಕಾಣಬಹುದು. ಇಂತಹ ಕೆಲವು ಗೋಮುಖ ವ್ಯಾಘ್ರಗಳು ಸ್ತ್ರಿ ಮತ್ತು ಪುರುಷರ ನಡುವೆ ತರತಮಭಾವಗಳನ್ನು ತಂದೊಡ್ಡುತ್ತಿದ್ದಾರೆ. ಸ್ತ್ರೀ ಶೋಷಣೆ ಹೆಣ್ಣು ಭ್ರೂಣಹತ್ಯೆ, ವರದಕ್ಷಿಣೆ, ಇನ್ನೂ ಮುಂತಾದ ಸ್ತ್ರೀ ಮೇಲಿನ ಶೋಷಣೆಗಳು ದಿನನಿತ್ಯ ದಿನಪತ್ರಿಕೆ ಮತ್ತು ದೂರದರ್ಶನದಲ್ಲಿ ನಾವು ಕಾಣುತ್ತಿರುವ ವಿಷಯ ಮತ್ತು ದೃಶ್ಯಗಳಾಗಿವೆ. ದೇಜಗೌರವರ ಶಾಂತಲಾ ನಾಟಕದಲ್ಲಿ ಇದಕ್ಕೆ ಉತ್ತರ ಸಿಗುತ್ತದೆ.

"**ಶಾಂತಲೆ:** ಗಂಡಸಿನ ಸ್ವಾರ್ಥ ಅಹಂಕಾರ ಹಾಗೂ ಅವುಗಳ ಫಲವಾಗಿ ಅವನೇ ರಚಿಸಿದ ಧರ್ಮ ಶಾಸ್ತ್ರಗಳು ಹೆಣ್ಣಿನ ಅಬಲಾವಸ್ಥೆಗೆ ಕಾರಣವಾದುವು. ಗಂಡಸನ್ನು ಹೊತ್ತು ಸಾಕಿದ ಹೆಣ್ಣನ್ನು ಅಬಲೆಯೆಂದು ಕರೆಯಬಹುದೇ ಪುತ್ರನನ್ನೆಂತೋ ಪುತ್ರಿಯನ್ನು ಅಂತೆಯೇ ಸಾಕಿ ಸರಿಯಾದ ಸಮನಾದ ಶೀಕ್ಷಣ ನೀಡಿದ್ದಾದರೆ ರಾಜ್ಯ ನಿರ್ಮಾಣ ಹಾಗೂ ಸಮಾಜೋದ್ಧಾರ ಕಾರ್ಯ ಇಹಪರ ಸಾಧನೆ ಎರಡೂ ಸಾಧ್ಯವಾಗುತ್ತವೆ."[೩]

ಸಾವಿರಾರು ವರ್ಷಗಳಿಂದ ಮುಚ್ಚದ ಬಾಯನ್ನು ತೆರೆಯದೆ ಪುರುಷರ ಆಜ್ಞೆಯನ್ನು ಅನುಸರಿಸುತ್ತ ಅಬಲೆಯಾದ ಸ್ತ್ರೀಯ ನಿಲುವನ್ನು ಶಾಂತಲೆ ಕಂಡಿಸುತ್ತಾಳೆ, ಈ ಅವ್ಯವಸ್ಥೆಯ ವಿರುದ್ಧ ಬಹು ಪ್ರಭಾವಶಾಲಿ ಅಸ್ತ್ರವಾದ 'ವಾಕ್‌ಸ್ವಾತಂತ್ರ್ಯ'ವನ್ನು ಮಹಿಳೆ ನಡೆಸಬೇಕಾಗಿದೆ. ಕುಟುಂಬದೊಳಗಿನ ಅನ್ಯಾಯ ಕ್ರೌರ್ಯ ಹಿಂಸೆಗಳನ್ನು ವಿರೋಧಿಸುತ್ತ ಬದುಕನ್ನು ಕಟ್ಟಿಕೊಳ್ಳಬೇಕಾಗಿದೆ. ಹೆಣ್ಣಿನ ಬದುಕಿನ ತಿರುಳೆನಿಸಿರುವ ಮದುವೆ, ದಾಂಪತ್ಯ, ತಾಯ್ತನಗಳನ್ನು ಯಶಸ್ವಿಯಾಗಿ ನಿರ್ವಹಿಸುತ್ತಿರುವ ಆಕೆಯ ಬದುಕು ಬವಣೆಗೊಳಪಡಿಸುವವರಿಗೆ ನಾಚಿಕೆಯಾಗಬೇಕು. ಅಂತಹವರನ್ನು ಮರುಭೂಮಿಯ ಮರೀಚಿಕೆಗೆ ಆಹುತಿ ಮಾಡಬೇಕು.

೧೯ನೇ ಶತಮಾನದಲ್ಲಿ ನಡೆದಂತಹ ಹಲವು ಸ್ತ್ರೀ ಸುಧಾರಣೆಯಿಂದಾಗಿ ನಮ್ಮಲ್ಲಿಂದು ಹಲವು ಮೌಢ್ಯಗಳ ಪ್ರಮಾಣ ಬೆರಳೆಣಿಕೆಯಷ್ಟು ಮಾತ್ರ ಕಡಿಮೆಯಾಗಿರುವುದನ್ನು ಕಾಣಬಹುದಾಗಿದೆ. ಇಂದು ಸ್ತ್ರೀ ಶಿಕ್ಷಣ, ವರದಕ್ಷಿಣೆ ವಿರೋಧಿ ಕಾನೂನು, ವಿಧವಾ ವಿವಾಹದ ಚರ್ಚೆ, ಪ್ರೌಢ ವಿವಾಹದ ಕಾನೂನುಗಳು ಕ್ರಮಬದ್ಧವಾಗಿ ಹಾಗೂ ಸಂವಿಧಾನದ ವಿಧಿಯನ್ವಯ ಜಾರಿಗೆ ಬರಬೇಕಾಗಿದೆ.

ಮತಾಂತರದ ಕಲ್ಪನೆ ಹೊಸ ಆವಿಷ್ಕಾರವೇನಲ್ಲ. ಅದು ಮೊದಲಿನಿಂದಲೂ ನಡೆಯುತ್ತಲೇ ಬಂದಿದೆ. ವಿಶ್ವದ ಅನೇಕ ಭಾಗಗಳಲ್ಲಿ ಮತಾಂತರ ಪ್ರಕ್ರಿಯೆಗಳಿಗೆ ಪ್ರೇರಕ ಶಕ್ತಿಗಳಿಗೇನೂ ಕಡಿಮೆಯಿಲ್ಲ. ಆರಂಭದಲ್ಲಿ ಕ್ರೈಸ್ತ ಮಿಷನರಿಗಳು ಮತ್ತು ಮುಸಲ್ಮಾನರು ಸುಲಭವಾಗಿ ಮತಾಂತರಿಸಿದರು. ಅವರಲ್ಲಿದ್ದ ಮೌಢ್ಯ ಆಚರಣೆಗಳೇ ಇದಕ್ಕೆಲ್ಲ ಮುಖ್ಯಕಾರಣ. ಅನಾಗರೀಕ ಅಮಾನವೀಯ ಅಂಶಗಳು ಇದಕ್ಕೆ ಮುಖ್ಯ ಕಾರಣವಾಗಿದೆ.

ಹಿಂದೂ ಧರ್ಮದ ಮುಖ್ಯ ಆಧಾರಸ್ತಂಭವಾಗಿರುವ ಚಾತುರ್ವರ್ಣ ಪದ್ಧತಿಯಲ್ಲಿ ಜಾತಿಗಳಷ್ಟೇ ಕಾಣಿಸಿಕೊಳ್ಳಲಿಲ್ಲ. ಮೇಲ್ವರ್ಗದವರಿಂದ ಶೋಷಿತರಾದ ಹಲಕೆಲವರು ಪಂಚಮ ವರ್ಗದವರಾದರು. ಇವರೆಲ್ಲರೂ ಮಾನವೀಯ ಮೌಲ್ಯಗಳಿಂದ ದೂರವಾಗಿ ಶೊಷಿತ ಬದುಕನ್ನು ನಡೆಸಬೇಕಾಯಿತು. ಇವರಿಗೆಲ್ಲ ಸರ್ವಸಮಾನ ಸ್ವತಂತ್ರ ಬೇಕಾಗಿತ್ತು. ಹಾಗಾಗಿ ಅದು ದೊರಕುವ ಧರ್ಮವನ್ನು ಅರಸಿಹೋಗಿ ಮತಾಂತರಗೊಂಡರು.

ಹೊಯ್ಸಳೇಶ್ವರಿ ಶಾಂತಲಾ ನಾಟಕದಲ್ಲಿ ದೇಜಗೌರವರು ಜಾತಿ, ಧರ್ಮ ಹಾಗೂ ಮತಾಂತರ ಕುರಿತು ತಮ್ಮ ನಿಲುವನ್ನು ಪ್ರಸ್ತಾಪಿಸಿದ್ದಾರೆ. ರಾಮಾನುಜಾಚಾರ್ಯರು ಹೊಯ್ಸಳ ರಾಜನ ಕುರಿತು ಮತ ಧರ್ಮದ ಬಗ್ಗೆ ವ್ಯಾಖ್ಯಾನ ನೀಡುವ ಸಂದರ್ಭ ಹೀಗಿದೆ.

"**ಆಚಾರ್ಯ:** ಪ್ರಭುವಾಗಿ ನಿಮ್ಮ ಈ ಪ್ರಶ್ನೆ ಸಾಧುವಾದದ್ದು. ಜಾತಿಯತೆಯಾಗಲಿ, ಅಸ್ಪೃಶ್ಯತೆಯಾಗಲಿ ಹಿಂದೂದರ್ಮ ಪ್ರಕಾರ ಸಮಾಜಿಕ ಭೇದ ಸರಿಯಲ್ಲ. ಈ ಧರ್ಮವನ್ನು ಯಾರು ತಾವಾಗಿಯೇ ಆತುಕೊಳ್ಳುತ್ತಾರೆಯೋ ಅವರು ಪರಸ್ಪರ ಸಮಾನರು. ಅವರಲ್ಲಿ ನೀಚೋಚ್ಚ ಭೇದಗಳಿರುವುದಿಲ್ಲ. ನಮ್ಮ ಶಿಷ್ಯರು ಊರೂರು ತಿರುಗಿ ಪ್ರಚಾರ ಮಾಡುವುದಿಲ್ಲ. ತಾವಾಗಿಯೇ ಬಂದವರಿಗೆ ಕೇವಲ ಮಾನವೀಯತೆಯ ದೃಷ್ಟಿಯಿಂದ ದೀಕ್ಷೆ ಕೊಡುತ್ತೇವೆ. ಸಾಮಾನ್ಯರಿಗೂ ಆತ್ಮಗೌರವ ಸ್ವಾಭಿಮಾನ, ಮಾನವೀಯತೆ, ಹಾಗೂ ಪಾರಮಾರ್ಥಿಕತೆಯನ್ನು ಪ್ರೇರಿಸುವ ದೃಷ್ಟಿಯಿಂದಲೇ ಹೊರತು ಲೌಕಿಕ ವಿಚಾರ ಲವಲೇಶವೂ ಇಲ್ಲ"[9]

ಪ್ರಸ್ತುತದಲ್ಲಿ ರಾಮಾನುಜಾಚಾರ್ಯರ ಮಾತು ಅನ್ವಯವಾಗುವಂತದ್ದೇ. ಸೇವೆಯ ಹೆಸರಿನಲ್ಲಿ ಮತಾಂತರ ಎಂದು ಕೂಗು ಎಬ್ಬಿಸುತ್ತಿದ್ದಾರೆ. ನಿರ್ಗತಿಕರಿಗೆ ಹಣದ ಅಥವಾ ವಸತಿಯ ಆಸೆ ತೋರಿಸಿ ಮತಾಂತರ ಮಾಡಿಕೊಳ್ಳುತ್ತಿದ್ದಾರೆ. ಅದರಲ್ಲೂ ಶೂದ್ರಾತಿಶೂದ್ರರು ಇಂದು ಹೆಚ್ಚು ಮತಾಂತರ ಹೊಂದುತ್ತಿರುವುದು ವೈಚಿತ್ರ್ಯವಾಗಿದೆ. ಇದಕ್ಕೆ ನಮ್ಮ ಸಂಪ್ರದಾಯಸ್ತ ಮೌಢ್ಯ ಪಿಪಾಸುಗಳು ಕಾರಣರಾಗುತ್ತಾರೆ. ಅಸ್ಪೃಶ್ಯತೆ, ಮುಟ್ಟು, ಕಳಂಕ ಮುಂತಾದ ಹೆಸರಿನಲ್ಲಿ ಶೂದ್ರರನ್ನು ಶೋಷಿಸುತ್ತ ಬಂದಿದ್ದಾರೆ. ಅವುಗಳಿಗೆಲ್ಲ ಎಲ್ಲಿ ಮುಕ್ತಿ ದೊರಕಿತೊ ಆ ಧರ್ಮದತ್ತ ಅವರು ಹೋದುದು ತಪ್ಪಲ್ಲ.

ಹಸಿದವನಿಗೆ ಅನ್ನ ಹೇಗೆ ಬೇಕೋ ಹಾಗೆಯೇ ವ್ಯವಸ್ಥಿತ ಬದುಕನ್ನು ನಿರ್ವಹಿಸಲು ಸಮಾನತೆ, ಪ್ರತಿ ವ್ಯಕ್ತಿ ಮೌಲ್ಯಗಳಿಗೆ ಗೌರವ, ಪ್ರಶಾಂತ ವಾತಾವರಣ ಎಲ್ಲಿ ಸಿಗುತ್ತದೆ, ಆ ಧರ್ಮಗಳತ್ತ ಇಂದು ಜನರು ದೌಡಾಯಿಸಿದ್ದಾರೆ. ಆದರೂ ಸಹ ಇಂದು ಬಲತ್ಕಾರದ ಅಥವಾ ಆಮಿಷಗಳನ್ನು ಒಡ್ಡಿ ಮತಾಂತರ ಮಾಡಿಕೊಳ್ಳುವ ಪ್ರಕ್ರಿಯೆಯೇ ಹೆಚ್ಚಾಗಿ ಎಲ್ಲಾ ಕಡೆ ಕಂಡುಬರುತ್ತಿರುವುದು ನಮ್ಮ ಸಮಾಜದಲ್ಲಿರುವ ಅವ್ಯವಸ್ಥೆಯ ಅನಾಚಾರಗಳಿಗೆ ಹಿಡಿದ ಕನ್ನಡಿಯಾಗಿದೆ.

ಚರಿತ್ರೆಯಲ್ಲಿ ಕಂಡಂತೆ ಹಿಂದೂ ಎಂಬ ಶಬ್ದ ಯಾವುದೇ ಒಂದು ಧರ್ಮವನ್ನು ಸೂಚಿಸುವಂತದ್ದಲ್ಲ. ಅದು ಒಂದು ಜೀವನ ಪದ್ಧತಿ. ಹಾಗೆಂದೇ ನ್ಯಾಯಾಲಯಗಳು ಸಹ ತೀರ್ಪನ್ನು ನೀಡಿರುವುದು ಗಮನಾರ್ಹ. ಸ್ವಾಮಿ ವಿವೇಕಾನಂದರು ಹಿಂದು ಧರ್ಮದಲ್ಲಿ ಕಂಡುಬರುವ ಅಮಾನವೀಯ ಆಚರಣೆ ಕುರಿತು ಹೇಳಿರುವಂತೆ ಪ್ರಪಂಚದ ಬೇರಾವ ಧರ್ಮದ ಪ್ರವಾದಿ ಅಥವಾ ಧರ್ಮ ಪ್ರಚಾರಕರೂ ಹೇಳಿಲ್ಲವೆಂಬುದು ಗಮನಾರ್ಹ. ಸರಳ ಸಜ್ಜನಿಕೆಯ ವ್ಯಕ್ತಿಯಾಗಿದ್ದ ಗಾಂಧೀಜಿಯವರು ಸಹ ಧರ್ಮದ ವಿಚಾರ ಬಂದಾಗ ಗೊಂದಲಕ್ಕೀಡಾಗುತ್ತಿದ್ದರು. ವರ್ಣಾಶ್ರಮ ಪದ್ಧತಿಯನ್ನು ಒಪ್ಪಿದ್ದ ಅವರು ಮೇಲ್ವರ್ಗದವರನ್ನು ಬದಲಾಯಿಸಲು

ಪ್ರಯತ್ನಿಸುತ್ತಿದ್ದರು. ಹೀಗೆ ಅವರಲ್ಲೇ ಧರ್ಮದ ವಿಷಯವಾಗಿ ಗೊಂದಲಗಳಿದ್ದುದು ಕಂಡುಬರುತ್ತದೆ.

ದೇಜಗೌರವರು ಬರೆದ ಈ ಎರಡು ನಾಟಕಗಳು ಸಹ ಚಾರಿತ್ರಿಕವಾಗಿ ಮಹತ್ವವುಳ್ಳ ಕೃತಿಗಳಾಗಿವೆ. ಈ ನಾಟಕದಲ್ಲಿ ಬರುವಂತಹ ಮುಖ್ಯ ಪಾತ್ರಗಳಾದ ಬಸವಣ್ಣ, ಹರಳಯ್ಯ, ವಿಷ್ಣುವರ್ಧನ, ಶಾಂತಲಾ ಮುಂತಾದ ಪಾತ್ರಗಳು ಸಹ ಚರಿತ್ರೆಯಲ್ಲಿ ಉಳಿದುಬಂದಿರುವ ಪಾತ್ರಗಳಾಗಿವೆ. ಇಂತಹ ವ್ಯಕ್ತಿಗಳ ಕುರಿತು ನಾಟಕ ರಚನೆ ಮಾಡಿರುವುದು ಪ್ರಸ್ತುತ ಅಧ್ಯಯನಕ್ಕೆ ಅನುಕೂಲವಾದುದಾಗಿದೆ. ಬಸವಣ್ಣನ ತತ್ವಾದರ್ಶಗಳ ಅನುಕರಣೆಯಿಂದ ನಮ್ಮ ದೇಶದಲ್ಲಿ ತಾಂಡವವಾಡುತ್ತಿರುವ ಜಾತ್ಯಾಂಧ ಮತ್ತು ಮತೀಯರ ಅಂಧಕಾರವನ್ನು ಅಳಿಸಲು ಸಾಧ್ಯವಾಗಬಹುದು.

ದೇವರಾಗಲಿ ಧರ್ಮವಾಗಲಿ ಇರುವುದು ಮನುಷ್ಯರಿಂದ ಮನುಷ್ಯರ ಸರ್ವ ಸಮಾನತೆ ಸಾಧಿಸಲು ಎಂಬದುದಾಗಿ ತಿಳಿಯಬೇಕು. ಯಾವುದೇ ಒಂದು ಧರ್ಮ ಒಂದು ಸಮಾಜದ ಏಳ್ಗೆಯನ್ನು ಸಾಧಿಸಬೇಕಾದರೆ ಆ ಸಮಾಜದ ಎಲ್ಲ ವರ್ಗದ ಜನರನ್ನು ಸಮಾನವಾಗಿ ಕಾಣಬೇಕಾಗುತ್ತದೆ. ಏಕೆಂದರೆ ನಿಜವಾದ ಧಾರ್ಮಿಕ ಮನಃಸ್ಥಿತಿ ಎಂದರೆ ಮನುಷ್ಯರೆಲ್ಲರ ಏಳ್ಗೆ ಹಾಗೂ ಸಮಾನತೆಯನ್ನು ಕಾಪಾಡುವುದೇ ಆಗಿದೆ. ಹಾಗಾಗಿ ಧರ್ಮ ಅಥವಾ ಜಾತಿಯ ಆಧಾರದಿಂದ ಯಾವುದೇ ವ್ಯಕ್ತಿಯನ್ನು ನಿಂದಿಸುವುದೇ ಆಗಲಿ, ಅವರ ಬಗ್ಗೆ ಅಸಹ್ಯವಾಗಿ ವರ್ತಿಸುವುದೇ ಆಗಲಿ ಸರಿಸಮಾನ ಕ್ರಮವಲ್ಲ. ಈ ತತ್ವಗಳನ್ನು ಹಿಂದೆ ಬುದ್ಧ, ಬಸವಣ್ಣರೂ ಸಹ ಹೇಳಿದ್ದಾರೆ. ಈ ಪರಿಕಲ್ಪನೆಯ ಆಧಾರದ ಮೇಲೆ ದೇಜಗೌರವರು ತಮ್ಮ ನಾಟಕಗಳನ್ನು ರಚಿಸಿರುವುದು ಕಂಡುಬರುತ್ತವೆ. ಹಾಗಾಗಿ ಈ ಎರಡು ನಾಟಕಗಳು ಸಹ ಸಮಕಾಲೀನ ಮತ್ತು ಚಾರಿತ್ರಿಕವಾಗಿ ನಮಗಿಂದು ಪ್ರಸ್ತುತವೆನಿಸುತ್ತವೆ.

## ಅಡಿಟಿಪ್ಪಣಿಗಳು

೧. ದೇಜಗೌ–ಹರಳಯ್ಯ ವಿಜಯ – ಪು. ೫೯

೨. ದೇಜಗೌ–ಹರಳಯ್ಯ ವಿಜಯ– ಪು. ೮೧

೩. ದೇಜಗೌ–ಹೊಯ್ಸಳೇಶ್ವರಿ ಶಾಂತಲಾ– ಪು. ೧೮

೪. ಅದೇ., ಪು. ೬೧

## ಅಧ್ಯಾಯ – ಎಂಟು

## ಲೇಖಕರ ಸಂದರ್ಶನ

**ಹರಳಯ್ಯ ವಿಜಯ/ಕ್ರಾಂತಿ ಕಹಳೆ**

- ನಾಟಕಕ್ಕೆ ಕ್ರಾಂತಿ ಕಹಳೆ ಎಂಬ ಶಿರ್ಷಿಕೆ ಹೇಗೆ ಅನ್ವಯಿಸುತ್ತೆ.

ನಾನು ನಾಟಕಕ್ಕೆ ಕ್ರಾಂತಿ ಕಹಳೆ/ ಹರಳಯ್ಯ ವಿಜಯ ಎಂಬ ಶಿರ್ಷಿಕೆ ನೀಡಿದ್ದೇನೆ. ಅಂದರೆ ಕಹಳೆ ಕೂಗುವ ಉದ್ದೇಶ ಒಂದು ವಿಷಯವನ್ನು ಸಂದೇಶವನ್ನು ಎಲ್ಲರಿಗೂ ತಿಳಿಸೋದಾಗಿರುತ್ತೆ. ನಾಟಕದಲ್ಲಿ ಬಸವಣ್ಣ, ಹರಳಯ್ಯ ಮುಂತಾದವರು ಅಂತರ್‌ಜಾತಿಯ ವಿವಾಹ ಮಾಡುವುದರ ಮೂಲಕ ಜಾತಿಯತೆಯನ್ನು ಅದರ ಪ್ರಖರತೆಯನ್ನು ತಗ್ಗಿಸಿದ್ದಾರೆ. ದೀಕ್ಷೆ ಪಡೆದಿರುವ ಮೂಲಕ ಶರಣ ತತ್ವ ಪಾಲಿಸುವುದರ ಮೂಲಕ ಸಮಾಜದ ಉದ್ದಾರ ಎಂಬ ಕಹಳೆ ಊದಿದ್ದಾರೆ.

- ಈ ನಾಟಕ ಬರೆಯಲು ನೀವು ಅಧ್ಯಯನ ಮಾಡಿದ ಇತರ ನಾಟಕಗಳು

  ಬಸವಣ್ಣನ ಕುರಿತಾದ ಈ ನಾಟಕ ಬರೆಯಲು ನಾನು ಯಾವುದೇ ನಾಟಕಗಳನ್ನು ಓದ್ಕೊಂಡಿಲ್ಲ. ನಾನು ಮೂಲ ಕಥೆಯನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡಿದ್ದೇನೆ. ಹಾಗಾಗಿ ಬಸವಣ್ಣ ಹರಳಯ್ಯ ಮದುವರಸರು ಮತ್ತು ಅವರ ತತ್ವಗಳು ನನಗೆ ಚೆನ್ನಾಗಿ ಗೊತ್ತಿದೆ. ಹಾಗಾಗಿ ಸ್ವಪ್ರೇರಿತನಾಗಿ ನಾನು ನಾಟಕ ರಚನೆ ಮಾಡಿದ್ದೇನೆ.

- ನಾಟಕದಲ್ಲಿ ಹರಳಯ್ಯನ ಪಾತ್ರವನ್ನು H: light's ಮಾಡಿದ್ದೀರ ಏಕೆ? ನಿಜ

  ಹರಳಯ್ಯ ಪಾತ್ರವನ್ನು ನಾನು ಉದ್ದೇಶಪೂರ್ವಕವಾಗಿಯೇ H: light's ಮಾಡಿದ್ದೀನಿ. ಆತ ಮಹಾನ್ ಶಿವಶರಣ. ಆಡಿದಂತೆ ನಡೆದವನವನು. ಮುಖ್ಯವಾಗಿ ಜಗದ್ವಿಖ್ಯಾತ ಬಸವಣ್ಣನವರ ತತ್ವಗಳನ್ನು ಪಾಲಿಸಿ ಆಚರಣೆಗೆ ತಂದವನು ಅವನೇ

- ಬಸವಣ್ಣರ ತತ್ವಗಳೇನು? ಪ್ರಸ್ತುತ ಹೇಗೆ ಆಚರಣೆಯಲ್ಲಿದೆ.

  ಜಾತೀಯತೆ ಹೋಗಲಾಡಿಸುವುದು, ಅಂತರ್‌ಜಾತಿ ವಿವಾಹ ಮಾಡಿಸೋದು ಎಲ್ಲರಿಗೂ ಸಮಾನ ಸ್ಥಾನಮಾನ ದೊರಕಿಸುವುದು ಇತ್ಯಾದಿ. ಇದಕ್ಕಾಗಿ ಬಸವಣ್ಣನವರ ಜೊತೆ ಅನೇಕ ಶಿವಶರಣರು ತಮ್ಮ ಪ್ರಾಣವನ್ನೇ ಒತ್ತೆ ಇಟ್ಟರು, ಕೆಲವರು ಪ್ರಾಣವನ್ನು ಕಳೆದುಕೊಂಡರು. ಆದ್ರೆ ಇವತ್ತು ಎಲ್ಲರೂ ಸಹ ನಾವು ಶಿವಶರಣರು ಬಸವಣ್ಣನ ಅನುಯಾಯಿಗಳು ಅಂತ ಹೇಳ್ಕೊಳ್ತಾರೆ. ಆದರೆ

ಅವರ ತತ್ವ ಅನುಸರಿಸಿ ಆಚರಿಸೋರು ಒಬ್ಬರೂ ಇಲ್ಲ. ಬಸವಣ್ಣ ಎಲ್ಲರಿಗೂ ನೆನಪಾಗೋದು ಬಸವ ಜಯಂತಿ ದಿವವೇ.

- ಅಂತರ್‌ಜಾತಿ ವಿವಾಹ ಕುರಿತಂತೆ ನಿಮ್ಮ ಅಭಿಪ್ರಾಯ

ಹರಳಯ್ಯ ಮದುವರಸರು ಅಂತರ್‌ಜಾತಿ ವಿವಾಹ ಮಾಡಿಸಿದ್ದು ಮೂಲದಲ್ಲೂ ಇದೆ. ಅದಕ್ಕಾಗಿ ಅವರನ್ನ ಆನೇ ಕಾಲಿಗೆ ಕಟ್ಟಿ ಮುಳ್ಳಿನಿಂದ ಹೊಡೆದು ಚಿತ್ರಹಿಂಸೆ ಕೊಟ್ರು. ಇವತ್ತಿಗೂ ಅಂತ ಮೂರ್ಖ ಸಂಪ್ರದಾಯ ವಾದಿಗಳು ಇದ್ದಾರೆ. ಇವತ್ತು ಹೆಚ್ಚು ಅಂತರ್‌ಜಾತಿ ವಿವಾಹಗಳು ಆಗ್ಬೇಕು ಎಲ್ಲರೂ ಕುವೆಂಪುರವರ ಮಂತ್ರಮಾಂಗಲ್ಯ ತತ್ವವನ್ನು ಪಾಲಿಸಬೇಕು. ಬಸವಣ್ಣರ ವಿಚಾರ, ತತ್ವ ಸಿದ್ಧಾಂತ ಬಳಕೆಗೆ ಬರಬೇಕು. ಮುಖ್ಯವಾಗಿ ನಮ್ಮ ಯುವಕರು ಕ್ರಾಂತಿಯ ರೀತಿ ಮೇಲೆದ್ದು ಬರಬೇಕಾಗಿದೆ.

- ಬಸವಣ್ಣ ಬಿಜ್ಜಳರ ಸಂಬಂಧ ಹೇಗಿತ್ತು

ಈ ವಿಚಾರವಾಗಿ ನಾನು ನಾಟಕದಲ್ಲಿ ಪ್ರಸ್ತಾಪ ಮಾಡಿದ್ದೇನೆ. ಬಸವಣ್ಣನವರಿಗೆ ಅಧಿಕಾರ, ಜಾಗವನ್ನು ಕೊಟ್ಟು ಅವರ ತತ್ವ ಸಿದ್ಧಾಂತಕ್ಕೆ, ಶಿವಶರಣರ ಮಂಡಲಿ ರಚಿಸೋದಕ್ಕೆ ಬಿಜ್ಜಳ ಸಹಾಯಕನಾಗಿದ್ದಾನೆ. ಬಸವಣ್ಣ ಬಿಜ್ಜಳ ಸ್ನೇಹಿತರ ರೀತಿ ಇದ್ದರು. ಬಿಜ್ಜಳನ ಆಸ್ಥಾನಿಕರು ಬಸವಣ್ಣನ ಮೇಲೆ ಏನೇ ಆರೋಪ ಮಾಡಿದ್ರು ಅದನ್ನು ಬಿಜ್ಜಳ ನಂಬೋದಿಲ್ಲ. ಆದರೆ ಸಂಪ್ರದಾಯಸ್ಥವಾದಿಗಳ ಕುಹಕ ನೀತಿಯಿಂದ ಆತ ನಿಸ್ಸಹಾಯಕನಾಗಬೇಕಾಗುತ್ತೆ ಅಷ್ಟೆ.

ಇವತ್ತಿಗೂ ಸಹ ಸಂಪ್ರದಾಯ ವಾದಿಗಳಿಗೆ, ಜಾತಿವಾದಿಗಳಿಗೆ ತಮ್ಮ ಜಾತಿನೇ ಮುಖ್ಯ. ದೇಶ, ಸಮಾಜದ ಒಂದು ಜನಾಂಗದ ಏಳ್ಗೆ ಅವರಿಗೆ ಮುಖ್ಯವಲ್ಲ. ಇವರಿಗೆಲ್ಲಾ ಬುದ್ಧಿಬರಲ್ಲ. ಮಠಗಳು ನಾಶವಾಗ್ಬೇಕು ಆವಾಗ ಏನಾದರೂ ಬದಲಾವಣೆ ಆಗ್ಬಹುದು.

- ಬಸವಣ್ಣನ ಜಾತಿ ಕುರಿತಂತೆ ಇವತ್ತು ಹಲವಾರು ಹೇಳಿಕೆಗಳಿವೆಯಲ್ಲ

ಬಸವಣ್ಣ ಮೂಲತಃ ಬ್ರಾಹ್ಮಣ. ಅವನ ವಚನಗಳಲ್ಲಿಯೇ ಇದೆಯಲ್ಲ 'ಉತ್ತಮಜಾತಿಯಲ್ಲಿ ಹುಟ್ಟಿದನೆಂಬ ಕಷ್ಟವ ನೋಯಿಸಿದರು' ಅಂತ ಅವನೇ ಹೇಳಿಕೊಂಡಿದ್ದಾನೆ. ಅವನು ಬ್ರಾಹ್ಮಣನಲ್ಲ ಅಂದೋರು ಬಸವಣ್ಣನ ಬಗ್ಗೆ ಇನ್ನೂ ಸರಿಯಾಗಿ ಓದ್ಕೊಂಡಿಲ್ಲ. ಬ್ರಾಹ್ಮಣರನ್ನು, ಬ್ರಾಹ್ಮಣತ್ವವನ್ನು ಮತ್ತು ಅವರ ಮೂಢ ಸಂಪ್ರದಾಯಗಳನ್ನು ಬಸವಣ್ಣನಷ್ಟು ಯಾರೂ ತಿರಸ್ಕರಿಸಿಲ್ಲ. ಬಸವಣ್ಣನ ಜಾತಿ ಬಗ್ಗೆ ಇಲ್ಲಸಲ್ಲದ ಚರ್ಚೆ ಮಾಡುವವರಿಗಾಗಿ ನನ್ನ 'ಕುಲದ ಹೊರಗೆ ಬಸವೇಶ್ವರ" ಅನ್ನೋ ಪುಸ್ತಕದಲ್ಲಿ ಉತ್ತರ ಕೊಟ್ಟಿದ್ದೇನೆ. ಹಲವರು

ಇವತ್ತಿಗೂ ಮಾಧ್ಯಮದಲ್ಲಿ ಮಿಂಚೋಕೋ ಏನೋ ಈ ತರ ಇಲ್ಲಸಲ್ಲದ್ದನ್ನು ಬರೀತಾನೇ ಇರ್ತಾರೆ. ಈ ವಿಚಾರವಾಗಿಯೇ ಬಸವಣ್ಣನವರ ವಚನಗಳಲ್ಲೇ ಎಲ್ಲ ಸತ್ಯನೂ ಇದೆ. ವಚನಗಳಲ್ಲಿರೋ ಸತ್ಯ ಸರಿಯಾಗಿ ತಿಳಿದುಕೊಳ್ಳಲ್ಲ ಜನಗಳಿಗೆ ಓದಿದರೆ ತಾನೇ ಸತ್ಯ ತಿಳಿಯೋದು.

- ಬಸವಣ್ಣನ ಅಂತ್ಯ ಹೇಗಾಯ್ತು

ಬಸವಣ್ಣ ಸಂಕುಚಿತ ಮನೋಭಾವ/ಧರ್ಮವನ್ನು ಹೊಂದಿದ ವ್ಯಕ್ತಿ ಅಲ್ಲ. ಆತ ನಿಸ್ವಾರ್ಥದಿಂದ ಸಮಾಜದ ಸೇವೆ ಮತ್ತು ಉದ್ಧಾರಕ್ಕಾಗಿಯೇ ಹುಟ್ಟಿದವನು. ಅದಕ್ಕಾಗಿಯೇ ತನ್ನನ್ನು ಸಂಪೂರ್ಣವಾಗಿ ತೊಡಗಿಸಿ-ಕೊಂಡವನು. ಇದನ್ನು ಸಹಿಸಲಾಗದೆ ಇರೋ ಅವಿವೇಕಿ ಸಂಪ್ರದಾಯ-ವಾದಿಗಳು ಹಿಡಿದುಕೊಂದಿದ್ದಾರೆ. ಆದರೆ ನಾನು ಹರಳಯ್ಯನ ವಿಜಯ ನಾಟಕದಲ್ಲಿ ಬೇಕೂ ಅಂತನೇ ಬದಲಾವಣೆ ಮಾಡ್ಕೊಂಡಿದ್ದೇನೆ. ಬಸವಣ್ಣನವರು ಕೂಡಲದಲ್ಲಿ ಧ್ಯಾನಸ್ಥರಾಗಿದ್ದಾಗ ಬಿಜ್ಜಳನ ಸೈನಿಕರು ಅವರನ್ನು ಹಿಡಿದು ಕೊಲ್ಲಲು ಹೋದಾಗ ಅವರು ಧ್ಯಾನಸ್ಥರಾದರು ಅಂತ ಹೇಳಿದ್ದೇನೆ. ಆದರೆ ಕೊಲೆ ಆಗಿರುವುದು ನಿಜಾನೆ ಕಂಣ್ರೆ

**ಹೊಯ್ಸಳೇಶ್ವರಿ ಶಾಂತಲಾ**

- ಶಾಂತಲೆಯ ಮುಖ್ಯ ಧೋರಣೆ/ನಿಲುವುಗಳೇನು?

ಈಕೆ ಹೊಯ್ಸಳ ಸಾಮ್ರಜ್ಯವನ್ನು ಕಟ್ಟುವುದರಲ್ಲಿ ಮಹತ್ವದ ಪಾತ್ರ ವಹಿಸಿದ್ದಾಳೆ. ಅಲ್ಲದೆ ಅನೇಕ ಸಂದರ್ಭಗಳಲ್ಲಿ ವಿಷ್ಣುವರ್ಧನನಿಗೆ ನೆರವಾಗಿದ್ದಾಳೆ. ವಿಷ್ಣುವರ್ಧನನು ರಾಮಾನುಜಾಚಾರ್ಯರ ತತ್ವಕ್ಕೆ ಮರುಳಾಗಿ ಅವರಿಂದ ದೀಕ್ಷೆ ಪಡೆದರೆ ಈಕೆ ಪಡೆಯೋದಿಲ್ಲ. ಅಂದರೆ ಚೋಳರು ಕನ್ನಡ ನಾಡಾದ ಬೆಂಗಳೂರು, ಕೋಲಾರ, ತಲಕಾಡು, ಮಂಡ್ಯ, ಮೈಸೂರು ಮುಂತಾದ ಪ್ರದೇಶಗಳನ್ನು ಆಕ್ರಮಿಸಿಕೊಂಡಿದ್ದರು. ಇವುಗಳನ್ನು ಮತ್ತೆ ಪಡೆಯೋದ್ರಲ್ಲಿ ಶಾಂತಲೆಯ ಪಾತ್ರ ಅತ್ಯಂತ ಮಹತ್ವದ್ದು.

ಇನ್ನೊಂದು ಮುಖ್ಯ ಕೆಲಸವೆಂದರೆ ದೇವಸ್ಥಾನಗಳನ್ನು ನಿರ್ಮಾಣ ಮಾಡಿದ್ದು. ಇವಳು ಅನೇಕ ಕಡೆ ದೇವಾಲಯಗಳನ್ನು ನಿರ್ಮಾಣ ಮಾಡ್ತಾಳೆ. ಈ ವಿಷಯದಲ್ಲಿ ಶಾಂತಲೆ ಯಾವುದೇ ತಾರತಮ್ಯಗಳನ್ನು ಮಾಡಿಲ್ಲ. ಶೈವದೇವಾಲಯಗಳನ್ನು ಮತ್ತು ವೈಷ್ಣವ ದೇವಾಲಯಗಳನ್ನು ಈಕೆ ಬೇಲೂರು ಹಳೇಬೀಡು ಮುಂತಾದ ಕಡೆಗಳಲ್ಲಿ ಕಟ್ಟಿಸಿದ್ದಾಳೆ.

- ಅಕ್ಕಮಹಾದೇವಿಗಿಂತ ಭಿನ್ನವಾದ ಅಂಶ ಶಾಂತಲೆಯಲ್ಲಿವೆಯೇ?

ಶಾಂತಲೆ ಅಕ್ಕಮಹಾದೇವಿಗಿಂತ ಪೂರ್ಣ ಭಿನ್ನ. ಅಕ್ಕಮಹಾದೇವಿಯ ಉದ್ದೇಶ ಆಧ್ಯಾತ್ಮಿಕ ಸಾಧನೆಯ ಕಡೆ ಇತ್ತು. ಆದರೆ ಶಾಂತಲೆಗೆ ಆಧ್ಯಾತ್ಮಿಕದ ಜೊತೆಗೆ ಕನ್ನಡ ನಾಡನ್ನು, ಇಲ್ಲಿನ ಜನರನ್ನು, ಸಮಾಜವನ್ನು ಬೆಳೆಸಬೇಕು ಎಂಬುದು ಆಗಿತ್ತು. ಹಾಗೆ ನಡೆದುಕೊಂಡಳು.

ಶಾಂತಲೆಯನ್ನು ಒಂದು ರೀತಿ ಕಿತ್ತೂರು ಚೆನ್ನಮ್ಮನ ಜೊತೆ ಸಮೀಕರಿಸಬಹುದು. ಚೆನ್ನಮ್ಮ ರಣರಂಗಕ್ಕೆ ಹೋಗಿ ಶತ್ರುಗಳೊಂದಿಗೆ ಯುದ್ಧ ಮಾಡುತ್ತಾಳೆ. ಶಾಂತಲೆ ಕೂಡ ಎಲ್ಲಾ ವಿದ್ಯೆಗಳಲ್ಲೂ ಪರಿಣಿತಿ ಸಾಧಿಸಿದವಳು, ರಣರಂಗಕ್ಕೂ ಹೋಗಿ ಯುದ್ಧ ಮಾಡುತ್ತಾಳೆ. ಅಲ್ಲದೆ ಬೇಹುಪಡೆಗೆ ಮುಖ್ಯ ತರಬೇತಿಯನ್ನು ಈಕೆನೆ ನೀಡುತ್ತಾಳೆ ಇದು ಚೋಳರಿಂದ ಕನ್ನಡ ನಾಡನ್ನು ಉಳಿಸೋಕೆ ಅತಿ ಮುಖ್ಯ ಕಾರಣ ಆಗುತ್ತದೆ. ಇವತ್ತಿಗೂ ಸಹ ಜಗತ್ತಿನ ಎಲ್ಲಾ ರಾಷ್ಟ್ರಗಳಲ್ಲೂ ಬೇಹು ಪಡೆ ಇದೆ. ಅದರಲ್ಲೂ ಅಮೆರಿಕ ಹೆಚ್ಚು ಬೇಹುಪಡೆ ಬಳಸುತ್ತಿದೆ.

- ಸ್ತ್ರೀವಾದಿ ಅಂಶಗಳು ಶಾಂತಲೆಯಲ್ಲಿವೆಯೇ ಇದ್ದರೆ ಶಾಂತಲೆಯನ್ನು ಸ್ತ್ರೀವಾದಿಗಳು ಹೇಗೆ ಗ್ರಹಿಸಬೇಕು?

ನಾನು ಯಾವುದೇ ಸ್ತ್ರೀವಾದಿ ಧೋರಣೆಗಳನ್ನು ಇಟ್ಟುಕೊಂಡು ಈ ನಾಟಕ ಬರೆದಿಲ್ಲ. ಆದರೆ ಆಕೆಯಲ್ಲಿ ಆ ಅಂಶ ಗುರುತಿಸಬಹುದು. ಆದರೆ ಆಕೆ ಚಿಕ್ಕಂದಿನಿಂದಲೇ ಸಂಗೀತ ನೃತ್ಯ, ಯುದ್ಧ ಕೌಶಲಗಳನ್ನು ಪಡೆದುಕೊಳ್ಳುತ್ತಾಳೆ.

ಅಂದರೆ ವಿದ್ಯೆ ಯಾರನ್ನೇ ಆದರೂ ಕತ್ತಲೆಯಿಂದ ಬೆಳಕಿಗೆ ತರುವ ಮಾರ್ಗ. ಹಿಂದೆ ಹೆಣ್ಣುಮಕ್ಕಳು ಓದಬಾರದು, ಬರೆಯಬಾರದು ಅಂತ ಶಾಲೆಗೆ ಯಾರು ಕಳಿಸ್ತಾ ಇರ್ಲಿಲ್ಲ. ಹಾಗಾಗಿ ಸ್ತ್ರೀಯರು ಅಂದು ಅಂಧಕಾರದ ಕೂಪದಲ್ಲಿ ಇದ್ದರು. ಆದರೆ ಶಾಂತಲೆ ಇಂದು ಸ್ತ್ರೀಯರು ಏನು ಅಂದುಕೊಂಡಿದ್ದರೋ ಅದನ್ನೆಲ್ಲಾ ಆಗಲೆ ಮಾಡಿಮುಗಿಸಿದ್ದಾಳೆ. ಮತ್ತೆ ಎಲ್ಲವನ್ನೂ ಗಳಿಸಿದ್ದಾಳೆ.

ವಿಷ್ಣುವರ್ಧನನು ಕೂಡ ಆಕೆಗೆ ಪೂರ್ಣ ಸ್ವಾತಂತ್ರ್ಯ ನೀಡಿದ್ದ. ಅವಳೂ ಸಹ ಗಂಡನಿಗೆ ಸೂಕ್ತ ಸಲಹೆ ಸೂಚನೆಗಳನ್ನು ಸರಿಯಾದ ಸಂದರ್ಭದಲ್ಲಿ ನೀಡುತ್ತಿದ್ದಳು; ಗಂಡನನ್ನು ಸರಿಯಾದ ದಾರಿಯಲ್ಲಿ ನಡೆಸಿಕೊಂಡಿದ್ದಳು. ಒಟ್ಟಿನಲ್ಲಿ ಆಕೆ ಹೊಯ್ಸಳ ಸಾಮ್ರಾಜ್ಯದ ಆಧಾರ ಸ್ತಂಭವೇ ಆಗಿದ್ದಳು.

- ಧರ್ಮ ಮತ್ತು ಜಾತಿ ಕುರಿತಂತೆ ಯಾವುದಾದರು ಅಂಶ ಇದೆಯಾ

ಇಲ್ಲಿ ಧರ್ಮ ಮತ್ತು ಜಾತಿ ವಿಷಯ ಹೆಚ್ಚು ಬರುವುದಿಲ್ಲ. ಹರಳಯ್ಯನ ವಿಜಯದಲ್ಲಿ ಹೆಚ್ಚು ಧರ್ಮ, ಜಾತಿಯ, ವಿಷಯ ಇದೆ ಕರ್ನಾಟಕಕ್ಕೆ ರಾಮಾನುಜಾಚಾರ್ಯರು ಬಂದಾಗ ಹೆಚ್ಚು ಮತಾಂತರ ಆಗುತ್ತದೆ. ಈ ಸಮಯದಲ್ಲಿ ವಿಷ್ಣುವರ್ಧನನು ಆಚಾರ್ಯರಿಂದ ಪ್ರೇರಿತನಾಗಿ ವೈಷ್ಣವ ಧರ್ಮಕ್ಕೆ ಮತಾಂತರ ಆಗುತ್ತಾನೆ. ಅಲ್ಲದೆ ತನ್ನ ಹೆಸರನ್ನು ಬದಲಾಯಿಸಿ-ಕೊಳ್ಳುತ್ತಾನೆ. ಆದರೆ ಶಾಂತಲೆ ಮತಾಂತರವಾಗುವುದಿಲ್ಲ. ಈಕೆ ಶೈವ ಮತ್ತು ವೈಷ್ಣವ ದೇವಾಲಯಗಳನ್ನೂ ಕಟ್ಟಿಸಿದ್ದಾಳೆ. ಆದರೆ ಶಿವದೇವಾಲಯವನ್ನು ಹೆಚ್ಚಿಗೆ ಕಟ್ಟಿಸಿದ್ದಾಳೆ. ಈಕೆಯ ತಂದೆ ಶೈವ ತಾಯಿ ಜೈನಳು. ಆದರೆ ಈಕೆ ತಂದೆ ಕಡೆ ಹೆಚ್ಚು ವಾಲುತ್ತಾಳೆ. ಕೊನೆಗೆ ಈಕೆ ಶಿವಗಂಗೆಗೆ ಹೋಗಿ ಸಾವಿಗೀಡಾಗುತ್ತಾಳೆ.

ಇದಕ್ಕೆ ಹೊರತಾಗಿ ಶಾಂತಲೆ ಶ್ರವಣಬೆಳಗೊಳಕ್ಕೆ ಹೋಗಿ ಸಲ್ಲೇಖನ ವ್ರತವನ್ನು ಪಡೆದು ಸಾಯುವುದಿಲ್ಲ. ಹೀಗೆ ಈ ನಾಟಕದಲ್ಲಿ ಸ್ವಲ್ಪ ಮತ ಧರ್ಮದ ವಿಷಯವು ಬಂದಿದೆ.

- ಭರತಮಾತೆ ಮತ್ತು ಭುವನೇಶ್ವರಿಯ ಸಂವಾದ ಇದೆ.

ಹೌದು ಇದು ನನ್ನ ಸ್ವಂತ ಕಲ್ಪನೆ ಕನ್ನಡನಾಡು ಮತ್ತು ಭೂಮಿಯ ಮಹಿಮೆಗೆ ಅಘಾದವಾದ ಇತಿಹಾಸವಿದೆ. ಇದರ ಮಹಿಮೆಯ ಸಂಕೇತವಾಗಿಯೇ ಈ ಸಂವಾದದ ಸಂದರ್ಭವನ್ನು ನಾನು ಬಳಸಿಕೊಂಡಿದ್ದೇನೆ.

# ಉಪಸಂಹಾರ

೯೩ರ ಇಳಿವಯಸ್ಸಿನಲ್ಲೂ ತಮ್ಮನ್ನು ಬರವಣಿಗೆ ಮತ್ತು ಓದಿನಲ್ಲಿಯೇ ತೊಡಗಿಸಿಕೊಂಡಿರುವ ದೇಜಗೌರವರು ವಯೋವೃದ್ಧರು ಮಾತ್ರವಲ್ಲದೆ ಜ್ಞಾನವೃದ್ಧರೂ ಆಗಿದ್ದಾರೆ. ಇವರ ಅಪಾರ ಅನುಭವ, ಜ್ಞಾನಸಂಪತ್ತು, ಆಲೋಚನೆ, ಮಾತೃಭಾಷಾ ಪ್ರೇಮ, ಸಾಹಿತ್ಯ ಸೃಷ್ಟಿಯ ಕಾರ್ಯ, ಹೋರಾಟ ಮನೋಭಾವ ಅಗಾಧವಾದುದು. ಅನುವಾದ ರಂಗದಲ್ಲಿ ಅವರ ಹೆಸರು ಚಿರಾಯು; ಕಾರಣ ಅವರು ಅನುವಾದಿಸಿರುವ ಟಾಲ್‌ಸ್ಟಾಯ್‌ನ ವಾರ್ ಅಂಡ್ ಪೀಸ್ ಮತ್ತು ಅನ್ನಕರೆನಿನ ಮುಂತಾದವು ಬೃಹತ್ ಕೃತಿಗಳು. ಇವು ಅನುವಾದ ಕ್ಷೇತ್ರದ ಮೇರು ಕೃತಿಗಳಾಗಿವೆ.

ಇದುವರೆಗೂ 'ಹರಳಯ್ಯನವಿಜಯ ಮತ್ತು ಹೊಯ್ಸಳೇಶ್ವರಿ ಶಂತಲಾ' ನಾಟಕಗಳನ್ನು ಅದರ ಹಲವು ಮುಖಗಳಿಂದ ಒರೆಹಚ್ಚಿ ನೋಡುವ ಪ್ರಯತ್ನ ಮಾಡಲಾಗಿದೆ. ೧೨ನೇ ಶತಮಾನದ ಐತಿಹಾಸಿಕ ಸಂಗತಿ ಹಾಗು ಧಾರ್ಮಿಕ ಕ್ರಾಂತಿಯನ್ನು ವಿಷಯವಾಗುಳ್ಳ ಈ ಎರಡು ಕೃತಿಗಳು ಮಹತ್ವಪೂರ್ಣವಾಗಿವೆ.

ಈ ನಾಟಕಗಳೆರಡು ಹಲವು ಮಜಲುಗಳಿಂದ ಮುಖ್ಯವೆನಿಸುತ್ತವೆ. ಮೇಲುಜಾತಿಯವರಂತೆ ಉತ್ತಮ ಬದುಕು ಮತ್ತು ಸ್ಥಾನಮಾನಗಳು ಸಿಗುವುದೆಂಬ ದಲಿತರ ಆಸೆಗೆ ಚಿಲುಮೆಯ ಶಕ್ತಿಯಂತಿದ್ದವರು ಬಸವಣ್ಣ. ಬ್ರಾಹ್ಮಣನಾಗಿ ಬ್ರಾಹ್ಮಣರನ್ನು, ಅವರ ಮೂಢ ಆಚರಣೆಗಳನ್ನು ವಿರೋಧಿಸಿ ಜಾತೀಯತೆ ಹಾಗೂ ಅಂತರ್‌ಜಾತಿಯ ವಿವಾಹಗಳನ್ನು ಮಾಡಿಸುವುದರ ಮೂಲಕ ಸಾಮಾಜಿಕ ಸಮಾನತೆಯನ್ನು ತರಲು ಮುಂದಾದವರು ಬಸವಣ್ಣ. ಹಾಗಾಗಿ ಬಸವಣ್ಣ ನಮಗೆ ಆದರ್ಶ ಮತ್ತು ಪ್ರಸ್ತುತವಾಗುತ್ತಾರೆ.

ಕನ್ನಡ ನಾಡುನುಡಿ ಹಾಗೂ ಹಲವು ಧರ್ಮಗಳಿಗೆ ರಕ್ಷೆಯಾಗಿದ್ದುದು ಹೊಯ್ಸಳ ಸಾಮ್ರಾಜ್ಯ. ಇಲ್ಲಿನ ಪ್ರಮುಖ ಆಡಳಿತ ರುವಾರಿ ದಕ್ಷ ನಾಯಕ ವಿಷ್ಣುವರ್ಧನ ಹಾಗೂ ಆತನ ಸತಿ ಶಾಂತಲೆಯ ಧೋರಣೆ ಇತಿಹಾಸ ಸ್ಮರಣೀಯವಾಗಿದೆ.

೧೨ನೇ ಶತಮಾನದಲ್ಲಿನ ಧಾರ್ಮಿಕ ಕ್ರಾಂತಿ, ಜಾತೀಯತೆ ಹಾಗೂ ಹೊಯ್ಸಳರಿಗಿದ್ದ ನಾಡಿನ ಅಭಿಮಾನ, ಧಾರ್ಮಿಕ ಸಹಿಷ್ಣುತೆಯನ್ನು ವಸ್ತುವಾಗುಳ್ಳ ಈ ನಾಟಕಗಳೆರಡರಲ್ಲಿ ಇತಿಹಾಸದ ಮರು ಓದು ಹಾಗೂ ನಿರ್ಮಾಣ ಕಾರ್ಯ ಯಶಸ್ವಿಯಾಗಿ ನಡೆದಿದೆ. ಅಲ್ಲಿನ ಇತಿಹಾಸ ಪ್ರಸಿದ್ಧ ವ್ಯಕ್ತಿಗಳಿಗೆ ದೇಜಗೌರವರು ತಮ್ಮ ನಾಟಕಗಳಲ್ಲಿ ಅರ್ಥಪೂರ್ಣ ಸ್ಥಾನ ಒದಗಿಸಿದ್ದಾರೆ.

ಈ ಸಂಪ್ರಬಂಧದ ಆರಂಭದಲ್ಲಿ ಕನ್ನಡ ನಾಟಕ ಪರಂಪರೆಯು ಪ್ರಾಚೀನದಿಂದ ಆಧುನಿಕ ಕಾಲದವರೆಗೂ ಬೆಳೆದುಬಂದ ಬಗೆ ಹಾಗೂ ನಾಟಕದ ರಚನೆ, ಸಂವಿಧಾನ, ಪಾತ್ರ, ತಂತ್ರ, ರಸ ಮತ್ತು ನಾಟಕದ ವಿವಿಧ ಅಂಗಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೂ ಈ ನಾಟಕಗಳೆರಡರ ಭಾಷೆ, ಸನ್ನಿವೇಶ ರಚನೆ, ಸಂದರ್ಭಕ್ಕೆ ತಕ್ಕ ತಂತ್ರಾಂಶದ ಬಳಕೆ ಹಾಗೂ ಶೈಲಿಯನ್ನು ಕುರಿತಂತೆ ನಾಲ್ಕನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಹಾಗೂ ನಾಟಕದ ಸಾರವನ್ನು ಸೂಕ್ಷ್ಮವಾಗಿ ವಿವೇಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ಸಮಕಾಲೀನ ಸಾಮಾಜಿಕ ಅಸಮಾನತೆಯ ಮೇಲೆ ಬೆಳಕು ಚೆಲ್ಲುವ ಈ ನಾಟಕಗಳು ಹಲವು ರೀತಿಯಲ್ಲಿ ಸಾಮ್ಯತೆಯಿಂದ ಕೂಡಿವೆ. ಜಾತೀಯತೆ, ಮತಾಂತರ, ಧಾರ್ಮಿಕಕ್ರಾಂತಿ, ಹಾಗೂ ನಾಡುನುಡಿ ಕುರಿತ ಹಿರಿಮೆ ಮುಂತಾದ ಅಂಶಗಳನ್ನು ಕುರಿತಂತೆ ಸಮಾನ ಅಂಶಗಳು ಕಂಡುಬರುತ್ತವೆ. ಪ್ರಸ್ತುತವಾಗಿಯೂ ಈ ಸನ್ನಿವೇಶಗಳನ್ನು ಹೋಲಿಕೆ ಮಾಡಿ ನೋಡಬಹುದಾಗಿದೆ. ಒಟ್ಟಿನಲ್ಲಿ ನಾಟಕಗಳೆರಡನ್ನು ವಿವಿಧ ರೀತಿ ಹಾಗೂ ಹಿನ್ನೆಲೆಗಳಿಂದ ತೌಲನಿಕವಾಗಿ ನೋಡುವ ಪ್ರಯತ್ನ ಮಾಡಲಾಗಿದೆ.

ಲೇಖಕರು ಐತಿಹಾಸಿಕ ವಸ್ತುಗಳನ್ನು ಪಡೆದುಕೊಂಡು ಹೊಸ ಸಂವೇದನೆಯಿಂದ ಚಿಂತನಾಕ್ರಮದಿಂದ ನೋಡುವ ಪ್ರಯತ್ನ ಮಾಡಿದ್ದಾರೆ. ಸ್ತ್ರೀ ಸಂವೇದನೆ ಹಾಗೂ ಅವರಿಗೆ ಸಮಾನ ಸ್ಥಾನಮಾನ ಮತ್ತು ಗೌರವಗಳನ್ನು ದೊರಕಿಸುವ ಪ್ರಯತ್ನ ನಡೆದಿದೆ.

ಈ ಅಧ್ಯಯನದ ಮುಖ್ಯ ಭಾಗವೆಂದರೆ ಲೇಖಕರೊಂದಿಗಿನ ಸಂದರ್ಶನ. ಈ ಭಾಗದಲ್ಲಿ ಲೇಖಕರೊಂದಿಗೆ ನೇರವಾಗಿ ಸಂದರ್ಶಿಸಿ ನಾಟಕದಲ್ಲಿನ ಅಂಶಗಳನ್ನು ಸಮಕಾಲೀನ ವಿಷಯಗಳಿಗೆ ಹೋಲಿಸಿ ಚರ್ಚಿಸಲಾಗಿದೆ. ಲೇಖಕರು ಸಹ ಮುಕ್ತವಾಗಿ ತಮ್ಮ ಅನುಭವವನ್ನು ಹಾಗೂ ನಾಟಕ ರಚನೆಗೆ ಕಾರಣಗಳನ್ನು ಅದರ ವಸ್ತು, ವಿಷಯ ಮತ್ತು ನಾಟಕದಲ್ಲಿನ ಹಲವು ಘಟ್ಟಗಳನ್ನು ಕುರಿತಂತೆ ನನ್ನೊಂದಿಗೆ ಮುಕ್ತವಾಗಿ ಚರ್ಚೆಗೆ ಅನುವು ಮಾಡಿಕೊಟ್ಟಿದ್ದಾರೆ.

ಒಟ್ಟಿನಲ್ಲಿ ನಾಟಕಗಳೆಡರಲ್ಲೂ ಇತಿಹಾಸದ ಒಂದು ಮುಖವನ್ನು ನೋಡುವ ಪ್ರಯತ್ನ ನಡೆದಿದೆ. ಈ ಅಂಶವನ್ನು ನಾವು ಮನದಲ್ಲಿರಿಸಿಕೊಂಡು ಬಸವಣ್ಣನವರ ಸಾಮಾಜಿಕ ಪರಿವರ್ತನೆಯ ಚಳುವಳಿಯನ್ನು ಅವರ ಕಾರ್ಯವ್ಯಾಪ್ತಿಯ ಪ್ರಕರತೆಯನ್ನು ಅರಿಯಬಹುದಾಗಿದೆ. ಅಲ್ಲದೆ ನಾಟಕದ ಸಂವಿಧಾನ, ಪಾತ್ರ ರಚನೆ, ರಚನಾ ಕೌಶಲ್ಯ ಉತ್ತಮವಾಗಿ ಮೂಡಿಬಂದಿದೆ. ಇವುಗಳಿಂದಾಗಿ ನಾಟಕಗಳೆರಡು ರಂಗಭೂಮಿಯ ಮೇಲೆ ಯಶಸ್ಸನ್ನು ಗಳಿಸಲು ಸಾಧ್ಯವಾಗುವುದು. ಈಗಾಗಲೇ

ಹೊಯ್ಸಳೇಶ್ವರಿ ಶಾಂತಲಾ ನಾಟಕವು ರಂಗದ ಮೇಲೆ ಹಲವು ಪ್ರದರ್ಶನಗಳನ್ನು ಕಂಡಿದ್ದು ಪ್ರೇಕ್ಷಕರ ಮನ್ನಣೆಗೂ ಪಾತ್ರವಾಗಿದೆ.

ಶಾಂತಲೆಯ ಪಾತ್ರದಲ್ಲಿನ ಆಕೆಯ ಪರಾಕ್ರಮ ಮತ್ತು ತ್ಯಾಗಗುಣಗಳಿಗೆ ಇಲ್ಲಿ ಆದ್ಯತೆ ದೊರಕಿದೆ. ಹೊಯ್ಸಳ ಸಾಮ್ರಾಜ್ಯದ ಸಾಂಸ್ಕೃತಿಕ ವಿಕಸನಕ್ಕೆ ಶಾಂತಲೆ ವಹಿಸಿದ ಪಾತ್ರ ಕಲಾತ್ಮಕವಾಗಿ ಚಿತ್ರಿತವಾಗಿದೆ.

'ಹರಳಯ್ಯನ ವಿಜಯ ಅಥವಾ ಕ್ರಾಂತಿಕಹಳೆ' ಎಂಬ ಈ ನಾಟಕ ದಲಿತನೊಬ್ಬನ ಕ್ರಾಂತಿ ಮತ್ತು ಆಧ್ಯಾತ್ಮಿಕ ಶಕ್ತಿಯನ್ನು ವಿಜೃಂಭಣೆಗೊಳಿಸಿದ ನಾಟಕವಾಗಿದೆ. ಈವರೆಗೆ ಬಸವಣ್ಣನವರನ್ನು ಕುರಿತು ಕನ್ನಡದಲ್ಲಿ ಸುಮಾರು ಇಪ್ಪತ್ತೆಂಟು ನಾಟಕಗಳು ಬಂದಿವೆ. ಸಹಜವಾಗಿಯೇ ಅಲ್ಲೆಲ್ಲ ಬಸವಣ್ಣನವರ ಧಾರ್ಮಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಧೋರಣೆಗಳಿಗೆ ಒತ್ತುಕೊಡಲಾಗಿದೆ. ಆದರೆ 'ದೇಜಗೌ' ಅವರ ಮೇಲಿನ ನಾಟಕದಲ್ಲಿ ತುಳಿತಕ್ಕೆ ಒಳಗಾದವರ ಜಾತ್ಯಾತೀತ ಮತ್ತು ಆಧ್ಯಾತ್ಮಿಕ ಧೀರ ಶಕ್ತಿಯನ್ನು ಗುರುತಿಸಬಹುದಾಗಿದೆ. ಹೀಗಾಗಿ ಇದು ಕನ್ನಡದ ಮಹತ್ವದ ಕ್ರಾಂತಿಕಾರಿ ನಾಟಕವಾಗಿದೆ. ನನ್ನ ಈ ಮಹಾಪ್ರಬಂಧದಲ್ಲಿ ಮೇಲ್ಕಂಡ ಸಂಗತಿಗಳ ಅಧ್ಯಯನಕ್ಕೆ ಮಹತ್ವ ನೀಡಲಾಗಿದೆ.

## ಗ್ರಂಥಋಣ

೧. ಕ್ರಾಂತಿಕಹಳೆ ಅಥವಾ ಹರಳಯ್ಯನ ವಿಜಯ
ಪ್ರೊ. ದೇಜಗೌ
ವೈದ್ಯವಾರ್ತಾ ಪ್ರಕಾಶನ, ೨೦೦೭
ಮೈಸೂರು.

೨. ಹೊಯ್ಸಳೇಶ್ವರಿ ಶಾಂತಲಾ
ಪ್ರೊ. ದೇಜಗೌ
ಸಿವಿಜಿ ಪಬ್ಲಿಕೇಷನ್ಸ್, ೨೦೦೭
ಬೆಂಗಳೂರು.

೩. ಪದ್ಮಶ್ರೀ ದೇಜಗೌ
ಸಂ. ತ.ಚಿ. ಚಲುವೇಗೌಡ
ತಳಗವಾದಿ ಪ್ರಕಾಶನ, ೨೦೦೫
ಮೈಸೂರು.

೪. ಕುವೆಂಪು ಅವರ ನಾಟಕಗಳು ಒಂದು ಅಧ್ಯಯನ
ಡಾ.ಮಳಲಿ ವಸಂತಕುಮಾರ್
ಪಂಪ ಪ್ರಕಾಶನ, ೧೯೯೫
ಮಾನಸಗಂಗೋತ್ರಿ, ಮೈಸೂರು.

೫. ಕನ್ನಡ ನಾಟಕ
ತ.ಸು. ಶಾಮರಾಯ
ಪ್ರತಿಭಾ ಪ್ರಕಾಶನ, ೧೯೯೨
ಮೈಸೂರು.

೬. ವಿಚಾರ ಸಾಹಿತ್ಯ–೨೦೦೧
ಸಂ. ಮಹೇಶ ತಿಪ್ಪಶೆಟ್ಟಿ
ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೨
ಬೆಂಗಳೂರು.

೭. ಶತಮಾನ ಸಾಹಿತ್ಯ ವಿಮರ್ಶೆ
ಸಂ.ಎಚ್.ಎಸ್. ರಾಘವೇಂದ್ರರಾವ್
ಕನ್ನಡ ಸಾಹಿತ್ಯ ಅಕಾಡೆಮಿ, ೨೦೦೧
ಬೆಂಗಳೂರು.

೮. ಸಂಕ್ರಾಂತಿ (ನಾಟಕ)
ಪಿ. ಲಂಕೇಶ್
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೫
ಬೆಂಗಳೂರು.

೯. ಕನ್ನಡ ಸಾಹಿತ್ಯ ಕೋಶ
ಸಂ. ರಾಜಪ್ಪದಳವಾಯಿ
ಶ್ರೀ ರಾಘವೇಂದ್ರ ಪ್ರಕಾಶನ, ೧೯೯೬
ಬೆಂಗಳೂರು– ೫೩.

೧೦. ಸ್ತ್ರೀವಾದ
ಡಾ.ಬಿ.ಎನ್. ಸುಮಿತ್ರಾಬಾಯಿ
ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೯
ಬೆಂಗಳೂರು.

೧೧. ಪ್ರಾಚೀನ ಭಾರತದ ಚರಿತೆ
ಡಾ. ಪಾಂಡುರಂಗರಾವ್ ದೇಸಾಯಿ
ಡಾ. ಶ್ರೀನಿವಾಸ ರಿತ್ತಿ
ಡಾ. ಬಾ.ರಾ. ಗೋಪಾಲ
ಪಠ್ಯ ಪುಸ್ತಕ ನಿರ್ದೇಶನಾಲಯ, ೧೯೭೭
ಧಾರವಾಡ.

೧೨. ಭಾಷೆ ಸಾಹಿತ್ಯ ಸಂಸ್ಕೃತಿಗೆ ಪ್ರೊ. ದೇಜಗೌ ಅವರ ಕೊಡುಗೆ
ಡಾ. ಟಿ.ಕೆ.ಕೆಂಪೇಗೌಡ
ಕನ್ನಡ ಸಾಹಿತ್ಯ ಪರಿಷತ್ತು, ೨೦೦೮
ಬೆಂಗಳೂರು.

***



ಡಾ. ದೇಜಗೌ



ಡಾ. ಡಿ. ತಿಮ್ಮಯ್ಯ



ಡಾ.ಎಂ.ಜಿ.ಆರ್. ಅರಸ್

ನಾಟಕಗಳ ಮೂಲಕ ಹೆಚ್ಚು ಹೆಚ್ಚು ಜನಕ್ಕೆ ಕ್ರಾಂತಿಕಹಳೆಯ ಸಂದೇಶವನ್ನು ತಲುಪಿಸುವುದರ ಮುಖಾಂತರ ಮಡಿವಂತಿಕೆಯ ಜನತೆಯ ಮನದಲ್ಲಿ ಅಡಗಿರುವ ಹೆಪ್ಪುಗಟ್ಟಿರುವ ಜಾತಿಯ ಪೆಡಂಭೂತವನ್ನು ನಿವಾರಿಸುವುದರೊಂದಿಗೆ ಶಾಂತಿಸಂದೇಶವನ್ನು ಮೂಡಿಸಬಹುದು. ಸುಸಂಸ್ಕೃತರನ್ನಾಗಿಯೂ ಸೂಕ್ಷ್ಮವೇದಿಗಳನ್ನಾಗಿಯೂ, ಹೃದಯವಂತರನ್ನಾಗಿಯೂ ಪರಿವರ್ತಿಸಬಹುದು ಎಂಬ ಮಹತ್ವಾಕಾಂಕ್ಷೆಯಿಂದ ಪದ್ಮಶ್ರೀ ಡಾ. ದೇಜಗೌ ಅವರು ಈ ಕೃತಿಯನ್ನು ರಚಿಸಿದ್ದಾರೆ.

ಶತಮಾನಗಳಿಂದ ಜಾತಿಯ ವಿಷವರ್ತುಲದಲ್ಲಿ ಸಹಬಾಳ್ವೆಯನ್ನು ನಾನಾ ಕಾರಣಗಳಿಂದ ಗಾವುದ ದೂರ ಇಡಲಾಗಿದೆ. ವಿಶೇಷವಾಗಿ ಜಾತೀಯತೆಯ ಕಬಂಧಬಾಹುಗಳಲ್ಲಿ ಬಂಧಿತರಾಗಿ, ಮಾನವೀಯತೆಯ ಸಂದೇಶವನ್ನು, ವಿಶ್ವಮಾನವತ್ವವನ್ನು ದುರ್ಬಲಗೊಳಿಸಲಾಗಿದೆ, ಕೊಲ್ಲಲಾಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಒಂದು ಸಮಾಧಿಯನ್ನೇ ನಿರ್ಮಿಸಲಾಗಿದೆ.

ನಾಟಕ ಸಂವಹನ ಸಾಧನವಾಗಿದೆ. ಸೂಕ್ಷ್ಮ ಸಂದೇಶಗಳನ್ನು ಸಮಾಜದ ಪರಿವರ್ತನೆಗಾಗಿ ಮನೆ ಮನೆಗೆ ಮಾತ್ರವಲ್ಲದೇ ಮನಕ್ಕೂ ತಟ್ಟುವ, ಮುಟ್ಟುವ, ಸ್ಪಂದಿಸುವ ಪ್ರಮುಖ ಸಾಧನವಾಗಿದೆ. ಈ ನಿಟ್ಟಿನಲ್ಲಿ ಈ ನಾಟಕ ಒಂದು ಅಪರೂಪದ ಕೃತಿಯಾಗಿದೆ.

೯೦೦ ವರ್ಷಗಳ ಹಿಂದೆ ನಡೆದ ಒಂದು ಸತ್ಯ ಘಟನೆಯನ್ನು ಆಧರಿಸಿ ರಚಿಸಿರುವ ಈ ಕೃತಿ ಡಾ. ದೇಜಗೌ ಅವರ ೯೦ನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ೯ನೆಯ ನಾಟಕವಾಗಿ ರೂಪುಗೊಂಡಿದೆ.

ಹರಳಯ್ಯ ವಿಜಯ ಅಥವಾ ಕ್ರಾಂತಿಕಹಳೆ ನಾಟಕವು ಎಲ್ಲಾ ವರ್ಗದವರ ಹೃದಯದಲ್ಲಿ ಪ್ರೀತಿಯ ಸೆಲೆಯನ್ನು ಹುಟ್ಟಿಸುತ್ತಾ ಮೌನವಾಗಿರುವ ಅಂತಃಕರಣವನ್ನು ಜಾಗೃತಗೊಳಿಸುತ್ತದೆ. ಮನದಾಳದಲ್ಲಿರುವ ಭಾವನೆಗಳನ್ನು ಶೋಧಿಸುವ, ಪರೀಕ್ಷಿಸುವ, ಆಲೋಚಿಸುವ ಪ್ರವೃತ್ತಿಗೆ ಇಂಬು ನೀಡುತ್ತದೆ, ನಾಂದಿ ಹಾಡುತ್ತದೆ. ಮಾನವೀಯತೆಯತ್ತ ಸಾಗುವ ಹೆದ್ದಾರಿಗೆ ಕೈಮರವಾಗಿದೆ.

ಜನಾಂಗದ ಕಲ್ಯಾಣಕ್ಕಾಗಿ ಶ್ರಮಿಸುತ್ತಿರುವ ಡಾ. ಡಿ. ತಿಮ್ಮಯ್ಯ ಮತ್ತು ಅವರೊಂದಿಗಿರುವ ಡಾ. ಎಂ.ಜಿ.ಆರ್. ಅರಸ್ ನಿರ್ವಹಿಸುತ್ತಿರುವ ಕಾರ್ಯಗಳು ಪ್ರಶಂಸನೀಯವಾದದ್ದು. ಎಲ್ಲರಿಗೂ ಶುಭವಾಗಲಿ, ಜಾತೀಯತೆ ವಿನಾಶವಾಗಲಿ.

- ಇಂದಿರಾಜೇ



[illegible]
ವಿದ್ಯಾರಣ್ಯಪುರಂ, ಮೈಸೂರು - 570 008 ☎ 2485959

# ಕ್ರಾಂತಿ ಕಹಳೆ
ಅಥವಾ
# ಹರಳಯ್ಯ ವಿಜಯ



ದೇಜಗೌ



ನಾನು ಆನರ್ಸ್ ತರಗತಿಯಲ್ಲಿ ಓದುತ್ತಿದ್ದಾಗ. ಕರ್ನಾಟಕದ ಇತಿಹಾಸವನ್ನು ಪೂರ್ಣವಾಗಿ ಅಧ್ಯಯನಿಸಿದ, ಪ್ರೊ. ಎಂ. ಎಚ್. ಕೃಷ್ಣರಂಥ ಮಹಾವಿದ್ವಾಂಸರ ಬಾಯಿಂದ ಆ ಮಧುರ ಸಾಹಸದ ಇತಿಹಾಸದ ಕಥೆಯನ್ನು ಕೇಳುವ ಅವಕಾಶ ಲಭ್ಯವಾಗಿತ್ತು. ದುರ್ವಿನೀತ, ವಿಷ್ಣುವರ್ಧನ, ನೃಪತುಂಗ, ಶಾಂತಲೆ, ಕೃಷ್ಣ, ಗೋವಿಂದ, ಪುಲಿಕೇಶಿಯರ ಸಾಹಸಕೃತ್ಯಗಳನ್ನು ಕೇಳುವಾಗ ರೋಮಾಂಚನವಾಗುತ್ತಿತ್ತು. ಪ್ರಾಧ್ಯಾಪಕರು ಹೇಳುತ್ತಿದ್ದರು: 6ನೆಯ ಶತಮಾನದಿಂದ ಹಿಡಿದು 11ನೆಯ ಶತಮಾನದವರೆಗಿನ ಕರ್ನಾಟಕದ ಇತಿಹಾಸವೆಂದರೆ, ಇಡೀ ದಕ್ಷಿಣ ಇಂಡಿಯಾದ, ಅಷ್ಟೇ ಏಕೆ, ಭಾರತದ ಇತಿಹಾಸವೆಂದು. ಅವರ ಸ್ವಾಭಿಮಾನ ಮತ್ತು ಆತ್ಮಗೌರವ ಪ್ರಜ್ಞೆ ವರ್ಣನಾತೀತ.

ಅಲ್ಲಿಂದೀಚೆಗೆ ಕನ್ನಡ ಸಾಹಿತ್ಯವನ್ನು ಮುಖ್ಯವಾಗಿ ಪಂಪ, ಬಸವೇಶ್ವರ, ಕನಕ, ಪುರಂದರ, ಕುಮಾರವ್ಯಾಸರ ಕೃತಿಗಳನ್ನು ಅಭ್ಯಸಿಸಿದಾಗ, ಕರ್ನಾಟಕ ಸಂಸ್ಕೃತಿಯ ವೈಭವವನ್ನು ನೆನೆದಾಗ ನನಗೆ ರೋಮಾಂಚನವಾಗುತ್ತಿತ್ತು.

ಕರ್ನಾಟಕ ಸಂಸ್ಕೃತಿಯ ಬಗೆಗಿನ ಇಂದಿನ ಕನ್ನಡಿಗರ ಅಜ್ಞಾನ ನಿರ್ಲಕ್ಷ್ಯಗಳನ್ನು ಗಮನಿಸಿದಾಗ, ಅವರ ಸ್ವಾಭಿಮಾನ ಆತ್ಮಗೌರವಗಳ ಬಡತನವನ್ನು ನೋಡಿದಾಗ ನನಗೆ ಅತೀವ ದುಃಖವಾಗುತ್ತದೆ.



ಸಿವಿಜಿ ಪಬ್ಲಿಕೇಷನ್ಸ್

# ಹೊಯ್ಸಳೇಶ್ವರಿ ಶಾಂತಲಾ

